

# ಮುಕ್ತಿಯ ಮಾರ್ಗ


ಲೇಖಕರು :

ಎಂ. ಎಂ. ಅಕ್ಬರ್

ಅನುವಾದಕರು :

ಅಬ್ದುಸ್ಸಲಾಮ್ ಕಾಟಿಪಳ್ಳ

(ಸಂಪಾದಕರು "ಸಿರಾತೇಮುಸ್ತಖೀಮ್" ಮಾಸಿಕ)



# ಮುಕ್ತಿಯ ಮಾರ್ಗ

ಲೇಖಕರು :
ಎಂ. ಎಂ. ಅಕ್ಬರ್

ಅನುವಾದಕರು :
ಅಬ್ದುಲ್ ಸಲಾಮ್ ಕಾಟಿಪಳ್ಳ
(ಸಂಪಾದಕರು "ಸಿರಾತೇಮುಸ್ತಖೀಮ್" ಮಾಸಿಕ)

خيركم من تعلم القرآن و علمه

**ದಾವಾ ಪಬ್ಲಿಕೇಶನ್ಸ್**
(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮಾನ್ಯತೆ ಪಡೆದಿದೆ)
ಹಿರಾ ಕಾಂಪ್ಲೆಕ್ಸ್, 2ನೇ ಬ್ಲಾಕ್, ಕಾಟಿಪಳ್ಳ, ಮಂಗಳೂರು- 575 030
Mob : 9986282449. E-mail : asshahadat@yahoo.co.in

Title : MUKTHIYA MAARGA

Author : M. M. Akbar

Translation : Abdussalam Katipalla

Printers : Pixel Designers
Mangalore

Copies : 1000 (January 2012)

Price : **Rs. 25/-**

Publisher :

خيركم من تعلم القرآن وعلمه

DAWA PUBLICATIONS
Affiliated to Jamiate Ahle Hadees Karnataka Goa
Hira Complex, 2nd Block,
Katipalla, Mangalore - 575 030.
Mob : 9986282449
E-mail : asshahadat@yahoo.co.in

# ಪರಿವಿಡಿ

الحمد لله رب العالمين،
الصلاة والسلام على أشرف الأنبياء والمرسلين،
وعلى آله وصحبه ومن اتبعه بإحسان إلى يوم الدين،
أما بعد

# ಪ್ರಕಾಶಕರ ಮಾತು

"ದಕ್ಷಿಣ ಕನ್ನಡ ಸಲಫಿ ವೆಲ್‌ಫೇರ್ ಟ್ರಸ್ಟ್(ರಿ.)"ಕಾಟಿಪಳ್ಳ ಅಲ್ಲಾಹನ ಪವಿತ್ರ ಧರ್ಮವಾದ ಇಸ್ಲಾಮಿನ ನೈಜ ಆಶಯಾದರ್ಶವನ್ನು ಜನರಿಗೆ ತಲಪಿಸುವ ನಿಟ್ಟಿನಲ್ಲಿ ಮತ್ತು ಇಸ್ಲಾಮಿನ ಕುರಿತು ಜನರ ಅಂತರಾಳದಲ್ಲಿ ನೆಲೆ ನಿಂತಿರುವ ತಪ್ಪು ಕಲ್ಪನೆಗಳನ್ನು ಹೋಗಲಾಡಿಸುವಲ್ಲಿ ನಿರಂತರ ಪರಿಶ್ರಮಿಸುತ್ತಿದೆ. ಮದ್ರಸತು ಸಲಫಿಯ್ಯ, ಮರ್ಕಝುಝ್ಝು ಸ್ವಾಲಿಹಾತ್, ಅಬ್ದುಲ್ಲ ಇಬ್ನ್ ಮಸ್‌ಊದ್ ಕುರ್‌ಆನ್ ಹಿಫ್ಲ್ ಕಾಲೇಜು ಮತ್ತು ದಾವಾ ಪಬ್ಲಿಕೇಷನ್ಸ್‌ಇವು ಸಂಸ್ಥೆಯ ಅಧೀನದಲ್ಲಿ ನಡೆಯುತ್ತಿರುವ ವಿವಿಧ ಸ್ಥಾಪನೆಗಳಾಗಿವೆ.

ಅಂಗೀಕೃತ ಧ್ಯೇಯದೆಡೆಗೆ ಹೆಜ್ಜೆ ಇಡಲು ಸಂಸ್ಥೆಯು ಬರಹ ಮಾಧ್ಯಮವನ್ನು ಅವಲಂಬಿಸಿ ಕೊಂಡಿದೆ. ದಾವಾ ಪಬ್ಲಿಕೇಷನ್ಸ್ ಮೂಲಕ ಪ್ರಕಟಿಸಲಾಗುತ್ತಿರುವ "ಸಿರಾತೇ ಮುಸ್ತಖೀಮ್" ಮಾಸಿಕವು ಈ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿದೆ. ಮಾತ್ರವಲ್ಲದೆ ಜಗದ್ವಿಖ್ಯಾತ ವಿಧ್ವಾಂಸರ ಕೃತಿಗಳನ್ನು ಕನ್ನಡೀಕರಿಸಿ ಕನ್ನಡದ ಓದುಗರಿಗೆ ಇಸ್ಲಾಮಿನ ನೈಜ ಅಶಯ ಆದರ್ಶಗಳನ್ನು ಕೆಲವು ಸಹೃದಯಿಗಳಿಗೆ ಮುಹಮ್ಮದ್(ಸ)ರವರ ಜೀವನ ಮತ್ತು ಸಂದೇಶಗಳನ್ನು ಮಾತ್ರವಲ್ಲದೆ ಸಹಾಬಿಗಳ ಜೀವನ ಚರಿತ್ರೆಗಳನ್ನು ಪರಿಚಯಿಸಿ ಕೊಡುತ್ತಿದೆ.

ಇದೀಗ ಖ್ಯಾತ ವಿದ್ವಾಂಸ ಎಂ. ಎಂ. ಅಕ್ಬರ್‌ರವರ "ಮೋಕ್ಷತ್ತಿಂಡೆ ಮಾರ್ಗಂ" ಎಂಬ ಮಳಯಾಲಿ ಪುಸ್ತಕವನ್ನು ಕನ್ನಡೀಕರಿಸಿ **"ಮುಕ್ತಿಯ ಮಾರ್ಗ"** ಎಂಬ ಎಂಬ ಶೀರ್ಷಿಕೆಯೊಂದಿಗೆ ಪ್ರಕಟಿಸಲಾಗುತ್ತಿದೆ. ಈ ಕೃತಿಯು ವಿವಿಧ ಧರ್ಮಗಳ ಕುರಿತು ತುಲನಾತ್ಮಕ ಅಧ್ಯಯನ ನಡೆಸುವವರಿಗೆ ಸಹಕಾರಿಯಾಗಿದೆ.

ಈ ಕೃತಿಯನ್ನು ಪ್ರಕಟಿಸಲು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಸಹೃದಗಳಿಗೂ ಅಲ್ಲಾಹು ಸತ್ಫಲವನ್ನು ನೀಡಲಿ. ಅಲ್ಲಾಹನ ಸತ್ಯ ಸಂದೇಶವನ್ನು ಈ ಪ್ರಚರಿಸಲು ಪರಿಶ್ರಮಿಸುತ್ತಿರುವ ಸತ್ಪ್ರವರ್ತಕರ ತಪ್ಪು ದೋಷಗಳನ್ನು ಅಲ್ಲಾಹು ಕ್ಷಮಿಸಲಿ. ಅವರ ಹೃದಯಗಳನ್ನು ಅವನು ಪ್ರೀತಿ – ವಿಶ್ವಾಸಗಳಿಂದ ಬೆಸೆಯಲಿ. ಇಹ–ಪರ ವಿಜಯಿಗಳಲ್ಲಿ ಅವನು ನಮ್ಮೆಲ್ಲರನ್ನು ಸೇರಿಸಲಿ. ಆಮೀನ್.

خيركم من تعلم القرآن وعلمه

**ದಾವಾ ಪಬ್ಲಿಕೇಶನ್ಸ್**

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮಾನ್ಯತೆ ಪಡೆದಿದೆ)

ಹಿರಾ ಕಾಂಪ್ಲೆಕ್ಸ್, 2ನೇ ಬ್ಲಾಕ್, ಕಾಟಿಪಳ್ಳ, ಮಂಗಳೂರು - 575 030

Mob : 9986282449. E-mail : asshahadat@yahoo.co.in

# ಮುಕ್ತಿಯ ಮಾರ್ಗ

ಜೀವನದಲ್ಲಿ ನಾವು ಹಲವಾರು ಆಗ್ರಹಗಳನ್ನು ಅಶೋತ್ತರಗಳನ್ನೂ ಇಟ್ಟು ಕೊಂಡವರಾಗಿದ್ದೇವೆ. ಈ ಆಗ್ರಹಗಳ ಪೂರ್ತೀಕರಿಣಕ್ಕಾಗಿ ನಾವೆಲ್ಲರೂ ಕಠಿಣವಾಗಿ ಪರಿಶ್ರಮಿಸುತ್ತಿರುತ್ತೇವೆ. ನಮ್ಮ ಒಂದು ಆಸೆ ನೆರವೇರುವಾಗ ಇನ್ನೊಂದು ಆಸೆ ಮನದಾಳದಲ್ಲಿ ಮೊಳಕೆಯೊಡೆಯುವುದು. ಇದು ಮನುಷ್ಯ ಸಹಜವಾದ ಒಂದು ಸ್ವಭಾವವಾಗಿದೆ. ತನ್ನ ಆಸೆಗಳೆಲ್ಲವನ್ನೂ ನೆರವೇರಿಸಿಕೊಳ್ಳಬೇಕೆಂಬ ಕಾತರ ಮನುಷ್ಯನಿಗೆ ಇರುತ್ತದೆ. ಆಸೆಯನ್ನು ಪೂರ್ತೀಕರಿಸುವ ನಿಟ್ಟಿನಲ್ಲಿ ತನ್ನ ರಕ್ತವನ್ನು ನೀರಿನಂತೆ ವ್ಯಯಿಸಿಕೊಂಡು ಮನುಷ್ಯರು ದುಡಿಯುತ್ತಿದ್ದಾರೆ. ಈ ಪರಿಶ್ರಮ, ಆದ್ವಾನಗಳಲ್ಲಿ ತೊಡಗಿದ್ದಂತೆಯೇ ಒಂದು ದಿನ ನಾವೆಲ್ಲರೂ ನಮ್ಮ ಜೀವನಕ್ಕೆ ವಿಧಾಯ ಹೇಳುತ್ತೇವೆ. **'ಮರಣ'** ಇದು ಮನುಷ್ಯ ಜೀವನದ ಅವಿಭಾಜ್ಯ ಅಂಗವಾಗಿದೆ. ಮರಣವನ್ನು ನಿಯಂತ್ರಿಸುವ ಅಮರತ್ವವನ್ನು ಗಳಿಸುವ ನಿಟ್ಟಿನ ಎಲ್ಲಾ ಪರಿಶ್ರಮಗಳೂ ವ್ಯರ್ಥಗೊಂಡವು. ಮರಣವನ್ನು ಗೆಲ್ಲುವುದಕ್ಕೆ ಮನುಷ್ಯನಿಂದ ಸಾಧ್ಯವೇ ಇಲ್ಲ. ಜನಿಸಿದ ಪ್ರತಿಯೊಂದು ಜೀವಿ ಮರಣ ಹೊಂದಬೇಕೆನ್ನುವುದು ಪ್ರಕೃತಿಯ ನಿಯಮವಾಗಿದೆ. ತನ್ನ ಇಚ್ಛೆಯನ್ನು ಪೂರ್ತೀಕರಿಸುವ ನಿಟ್ಟಿನಲ್ಲಿ ಸಮರ ಸಜ್ಜಿತನಾಗಿರುವ ಸ್ಥಿತಿಯಲ್ಲೇ ಮನುಷ್ಯನು ಮರಣಹೊಂದಿ ಮರೆಯಾಗುವನು. ಜೀವನದ ಆಶೋತ್ತರಗಳನ್ನೆಲ್ಲಾ ಈಡೇರಿದ ಬಳಿಕವೇ ಮರಣ ಹೊಂದುವುದೆಂಬ ಕ್ರಮವನ್ನು ಇಲ್ಲಿ ಅಳವಡಿಸಲಾಗಿಲ್ಲ. ಗರಿಷ್ಟವೆಂದರೆ ನೂರ ಇಪ್ಪತ್ತು ವರ್ಷಗಳಷ್ಟೇ ಮನುಷ್ಯನ ಜೀವನದ ಅವಧಿ ಎಂದು ಆಧುನಿಕ ವಿಜ್ಞಾನಿಗಳು ಹೇಳುತ್ತಾರೆ. ಈ ಆಯಸ್ಸಿನಲ್ಲಿ ಮನುಷ್ಯನು ತನ್ನ ಆಸೆ-ಆಕಾಂಕ್ಷೆಗಳನ್ನೆಲ್ಲಾ ಪೂರ್ತೀಕರಿಸುವುದು ಅಸಾಧ್ಯವಿಲ್ಲವೆನ್ನುವ ಸತ್ಯವನ್ನು ಅರಿತುಕೊಂಡ ಹತಾಶ ಮನಸ್ಸು ಅದೆಲ್ಲವೂ ಪೂರ್ತೀಕರಿಸಲ್ಪಡುವ ಒಂದು ಲೋಕವನ್ನು ಎದುರು ನೋಡುವುದು ಸಹಜವಾಗಿದೆ. ಈ ಪ್ರಪಂಚದ ವ್ಯವಸ್ಥೆಯು ತನ್ನ ಇಚ್ಛೆಗಳನ್ನು ಪೂರ್ತಿಕರಿಸಲು ಪೂರಕವಾಗಿಲ್ಲವೆನ್ನುವುದನ್ನು ಮನವರಿಕೆ ಮಾಡಿಕೊಂಡ ಮನುಷ್ಯನು ಈ ಲೋಕದ ಜೀವನಕ್ಕೆ ವ್ಯತ್ಯಸ್ಥವಾದ ಒಂದು ಜೀವನ ವ್ಯವಸ್ಥೆಯನ್ನು ಇಚ್ಛಿಸುತ್ತಾನೆ.

ಅಮರತ್ವದ ಬಯಕೆಯು ಮನುಷ್ಯನ ಪ್ರಕೃತಿಯಲ್ಲಿ ರೂಢಮೂಲವಾಗಿರುವ ಒಂದು ಸಂಗತಿಯೇ ಆಗಿದೆ. ಈ ಪ್ರಪಂಚದ ಸುತ್ತ ದೃಷ್ಟಿಹರಿಸುವ ನಾವು ಮನುಷ್ಯನಿಗೆ ಸರಿಸಮಾನವಾದ ಒಂದು ಜೀವಿಯ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಪ್ರಪಂಚದಲ್ಲಿ ಕಾಣಸಿಗುವ ಸೃಷ್ಟಿಗಳ ಪೈಕಿ ಅತ್ಯುತ್ತಮ ಸೃಷ್ಟಿಯು ಮನುಷ್ಯನಾಗಿದ್ದಾನೆ. ಕೋಟ್ಯಾಂತರ ವರ್ಷಗಳು ಹಳೆಯದಾದ ಈ ಪ್ರಪಂಚದಲ್ಲಿ ಮನುಷ್ಯನೆನ್ನುವ ಪರಮೋಚ್ಛ ಸೃಷ್ಟಿ ಪ್ರತ್ಯಕ್ಷಗೊಂಡು ಸಾವಿರಾರು ವರ್ಷಗಳಷ್ಟೇ ಗತಿಸಿದೆ. ಭೂಮಿಯು ಒಂದರೆಗಳಿಗೆ ಕಂಪಿಸಿ ಬಿಟ್ಟರೆ ಆ ಸೃಷ್ಟಿಯ ಅವಶೇಷವಿಲ್ಲದಂತಾಗುವುದು ಖಚಿತ. ಮನುಷ್ಯ ಜೀವನವು ಯಾವುದೆಲ್ಲಾ ಭೌತಿಕ ಘಟಕಗಳಿಗೆ ಹೊಂದಿಕೊಂಡು ಸೃಷ್ಟಿಸಲ್ಪಟ್ಟಿದೆಯೋ, ಅವುಗಳು ಕೋಟ್ಯಾಂತರ ವರ್ಷಗಳಿಗಿಂತಲೂ ಹೆಚ್ಚು ಅವಧಿ ಬಾಳುತ್ತದೆ. ನಾವು ಜನಿಸುವುದಕ್ಕಿಂತ ಮುಂಚೆಯೇ ಅವುಗಳು ಇಲ್ಲಿ ನೆಲೆ ನಿಂತಿದ್ದವು. ನಾವು ಮರಣ ಹೊಂದಿದ ಬಳಿಕವೂ ಅವಿಲ್ಲಿ ಇರುವುದು. ಅಂದರೆ, ಜೀವಿಗಳ ಪೈಕಿ ಅತ್ಯುತ್ಕೃಷ್ಟವಾದ ಜೀವಿಯು ಈ

ಪ್ರಪಂಚದಲ್ಲಿ ಅತ್ಯಲ್ಪ ಅವಧಿ ಮಾತ್ರ ಜೀವಿಸುವುದು ಎಂದಾಯಿತು. ಗರಿಷ್ಠ ನೂರ ಇಪ್ಪತ್ತು ವರ್ಷಗಳು ಮಾತ್ರ! ಇದನ್ನು ಮನುಷ್ಯನ ಬುದ್ಧಿ ಅಂಗೀಕರಿಸಲು ಒಪ್ಪುವುದಿಲ್ಲ. ತಾನು ಸರ್ವೋತ್ಕೃಷ್ಟನೆಂದು ಹೇಳಲ್ಪಡಬೇಕಾದರೆ ಈ ಜೀವನದ ನಂತರ ಇನ್ನೊಂದು ಜೀವನವಿರಲೇಬೇಕೆಂದು ಮನುಷ್ಯನ ಮನಸ್ಸು ಆಗ್ರಹಿಸುತ್ತದೆ.

ಒಳಿತಿನ ಪ್ರೇರಣೆಯು ಮನುಷ್ಯನ ಪ್ರಕೃತಿಯಲ್ಲೇ ಅಂತರ್ಗತವಾಗಿರುತ್ತದೆ. ಕೆಡುಕಿನ ಕುರಿತು ವಿರೋಧವೂ ಜನ್ಮತಃ ಅವನಲ್ಲಿರುತ್ತದೆ. ಆದರೆ ಯಾವುದು ಒಳಿತು ಮತ್ತು ಯಾವುದು ಕೆಡುಕೆಂದು ಪ್ರತ್ಯೇಕಿಸಲು ಅವನಿಂದ ಸಾಧ್ಯವಾಗುವುದಿಲ್ಲ. ಅವನು ಕೆಡುಕು ಪ್ರವರ್ತಿಸುತ್ತಿರುವ ಕೆಟ್ಟವರೆಂದು ಪರಿಗಣಿಸಿದ ಹಲವಾರು ಜನರು ಅವರ ಜೀವನದಲ್ಲಿ ಐಶಾರಾಮದ ಬದುಕು ಸವಿಯುತ್ತಿರುವುದನ್ನೂ, ಒಳಿತು ಪ್ರವರ್ತಿಸುವ ಹಲವರ ಜೀವನದಲ್ಲಿ ಸಂಕಷ್ಟ ಅನುಭವಿಸುತ್ತಿರುವುದನ್ನು ಅವನು ಕಾಣುತ್ತಿದ್ದಾನೆ. ಒಳಿತು ಮತ್ತು ಕೆಡುಕಿಗೆ ತಕ್ಕ ಪ್ರತಿಫಲವನ್ನು ನೀಡುವ ಸಮರ್ಪಕ ವ್ಯವಸ್ಥೆಯು ಈ ಲೋಕದಲ್ಲಿ ಇಲ್ಲವೆನ್ನುವುದು ಸುಸ್ಪಷ್ಟವಾಗಿ ಗೋಚರಿಸುತ್ತದೆ.

ಜೀವನವನ್ನು ಸಂಪೂರ್ಣವಾಗಿ ಜನಸೇವೆಗಾಗಿ ಮುಡಿಪಾಗಿಟ್ಟ ಹಲವಾರು ಮಹನೀಯರಿಗೆ ಸಮಾಜದಿಂದ ದೊರಕುವ ಪ್ರತಿಫಲವು ಮರ್ದನಗಳು ಮತ್ತು ಅಪಮಾನಗಳಾಗಿರುತ್ತದೆನ್ನುವುದನ್ನು ಚರಿತ್ರೆಯಿಂದ ಕಂಡುಕೊಳ್ಳಬಹುದಾಗಿದೆ. ಅವರ ಕುರಿತು, ಅವರ ತ್ಯಾಗ ಮತ್ತು ಪರಿಶ್ರಮಗಳ ಕುರಿತು ಜನರಿಗೆ ಯಾತಾರ್ಥವಾದ ಅರಿವು ಉಂಟಾಗುವುದೇ ಅವರ ಮರಣದ ನಂತರವಾಗಿರುವುದು. ಹಾಗಾದರೆ ಅವರು ಮಾಡಿದ ಸೇವೆ, ಪರಿಶ್ರಮ, ತ್ಯಾಗ ಮತ್ತು ಸಾಧನೆಗೆ ತಕ್ಕ ಪ್ರತಿಫಲ ದೊರಕಿಸಿಕೊಡುವ ಒಂದು ವ್ಯವಸ್ಥೆಯ ಅವಶ್ಯಕತೆಯ ಇಲ್ಲವೇ? ಇನ್ನು ಇದಕ್ಕೆ ವ್ಯತಿರಿಕ್ತವಾದ ಮತ್ತೊಂದು ಮುಖ ನೋಡಿರಿ. ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿ ಜನ-ಜೀವನವನ್ನು ಅಸ್ತವ್ಯಸ್ತಗೊಳಿಸುವ ಪ್ರವರ್ತನೆಗಳನ್ನು ಮಾಡುತ್ತಾ ಐಶಾರಾಮ ಜೀವನವನ್ನು ಸವೆದು ಇಹಲೋಕಕ್ಕೆ ವಿದಾಯ ಹೇಳಿದ ಅದೆಷ್ಟೋ ಜನರ ಕುರಿತು ಚರಿತ್ರೆಯಲ್ಲಿ ಉಲ್ಲೇಖಗಳಿವೆ. ಅವರ ಕ್ರೌರ್ಯತೆಯ ಕುರಿತು ನೆನಪಿಸುವಾಗ ಈಗಲೂ ಹೃದಯವು ತಲ್ಲಣಿಸುತ್ತದೆ. ಇಂತಹಾ ಕ್ರೌರ್ಯ, ಪೈಶಾಚಿಕ ವರ್ತನೆಗಳಿಂದ ಮನೋರಂಜಿಸಿಕೊಳ್ಳುತ್ತಲೇ ಅವರು ಮರಣ ಹೊಂದಿದರು. ಇಂತಹಾ ರಾಕ್ಷಸೀ ಕೃತ್ಯಗಳಿಗೆ ತಕ್ಕ ಶಿಕ್ಷೆ ಕೊಡಲು ಸಾಧ್ಯವಿಲ್ಲವೆಂದಾದರೆ ಒಳಿತು ಪ್ರವರ್ತಿಸಬೇಕೆಂದೂ ಕೆಡುಕನ್ನು ತೊರೆಯಬೇಕೆಂದೂ ಹೇಳುವುದಕ್ಕೆ ಏನರ್ಥವಿದೆ? ಇನ್ನು ಒಂದೊಮ್ಮೆ ಅವರು ಶಿಕ್ಷೆಗೆ ಒಳಪಟ್ಟರೂ ಅವರ ಕ್ರೌರ್ಯ ಮತ್ತು ಭೀಬತ್ಸತೆಗೆ ಸರಿಸಮನವಾಗಿ ಶಿಕ್ಷೆ ನೀಡಲು ಯಾವ ನ್ಯಾಯವ್ಯವಸ್ಥೆಗಾದರೂ ಸಾಧ್ಯವಿದೆಯೇ? ಒಂದು ನರಪಿಳ್ಳೆಯನ್ನು ವಧಿಸಿದವನಿಗೂ ಸಾವಿರ ಸಂಖ್ಯೆಯಲ್ಲಿ ಜನರನ್ನು ಸಮೂಹ ಹತ್ಯೆಗೈದವನಿಗೂ ನೀಡಲು ನಮ್ಮ ನ್ಯಾಯಾಲಯದಲ್ಲಿರುವ ಗರಿಷ್ಟ ಶಿಕ್ಷೆಯೆಂದರೆ ಮರಣ ದಂಡನೆಯಲ್ಲವೇ? ಇದು ಬುದ್ದಿಗೆ ಒಪ್ಪಿಗೆಯಾಗುವುದಾದರೂ ಹೇಗೆ? ಜಗತ್ತಿನ ಯಾವುದೇ ನ್ಯಾಯ ವ್ಯವಸ್ಥೆಯಲ್ಲೂ ಒಳಿತು ಮತ್ತು ಕೆಡುಕಿಗೆ ಸರಿಸಮಾನವಾದ ಪ್ರತಿಫಲ ನೀಡಲು ಸಾಧ್ಯವಿಲ್ಲವೆನ್ನುವುದನ್ನು ಗ್ರಹಿಸಿದ ಮಾನವ ಹೃದಯ ಇವುಗಳಿಗೆಲ್ಲಾ ತಕ್ಕುದಾದ ಪ್ರತಿಫಲ ನೀಡಲು

ಶಕ್ತವಾದ ಒಂದು ನ್ಯಾಯವ್ಯವಸ್ಥೆಗಾಗಿ ಆಗ್ರಹಿಸುತ್ತದೆ. ಈ ಲೋಕದಲ್ಲಿರುವ ಯಾವುದೇ ಆಡಳಿತ ವ್ಯವಸ್ಥೆಗಳು ಈ ಬೇಡಿಕೆಯನ್ನು ಪೂರೈಸಲಾರದು ಎನ್ನುವ ವಿಷಯ ಮನವರಿಕೆಯಾಗುವಾಗ ಸ್ವಾಭಾವಿಕವಾಗಿಯೇ ಈ ನ್ಯಾಯ ತೀರ್ಮಾಣವು ಈ ಜೀವನದಲ್ಲಿ ಅಸಾಧ್ಯವೆನ್ನುವ ವಾಸ್ತವ ನಿಲುವಿನೆಡೆಗೆ ಮನುಷ್ಯನ ಬುದ್ಧಿಯು ಸರಿಯುತ್ತದೆ.

ಅಮರತ್ವವನ್ನು ಬಯಸುವ ಮನಸ್ಸಾಗಿದೆ ಮನುಷ್ಯನದು. ಆಯಸ್ಸು ಕ್ಷೀಣಿಸುತ್ತಾ ಹೋದಂತೆ ದೇಹವು ದುರ್ಬಲಗೊಂಡು ಸಾವಿನ ಚಿಹ್ನೆಗಳನ್ನು ಅರ್ಥೈಸಿಕೊಳ್ಳುವ ಸಮಯದಲ್ಲಿ ನಾನು ನನ್ನ ಸಾಧನೆಗಳಿಂದ ಮುಂದಿನ ಪೀಳಿಗೆಯ ಹೃದಯಗಳಲ್ಲಾದರೂ ಜೀವಿಸಿರಬೇಕೆಂದು ಬಯಸುವವರಾಗಿದ್ದೇವೆ ನಾವೆಲ್ಲರೂ. ಬಡತನದ ಬೇಗುದಿಯಲ್ಲಿ ಬಿದ್ದು ಅನ್ನಾಹಾರಕ್ಕೆ ಗತಿ ಇಲ್ಲದೆ ಸಾವಿನ ಕಡೆ ಮುಖ ಮಾಡಿರುವ ವೃದ್ಧನೂ, ಮರಣ ಶಯ್ಯೆಯಲ್ಲಿದ್ದು ತನ್ನ ಹೆಸರಲ್ಲಿ ಸ್ಮಾರಕ ಭವನಗಳನ್ನು ನಿರ್ಮಿಸಲು ಸೂಚಿಸುವ ಚಕ್ರವರ್ತಿಯೂ ಈ ಮೇಲಿನ ಬಯಕೆಯನ್ನಾಗಿದೆ ಪ್ರಕಟಿಸುವುದು. ತಾನು ತೀರಿಕೊಂಡರೂ ಯಾವುದಾದರೂ ಒಂದು ರೀತಿಯಲ್ಲಿ ಈ ಲೋಕದಲ್ಲಿ ಜೀವಿಸಿರಬೇಕೆಂಬ ಬಯಕೆ. ಮರಣದೊಂದಿಗೆ ಮನುಷ್ಯ ಜೀವನದ ಪರಿಪೂರ್ಣ ಅಂತ್ಯ ಕಾಣುವುದೆಂದು ನಂಬುವ ವಿಚಾರವಾದಿಗಳು ಕೂಡಾ ಲೋಕದಲ್ಲಿ ನಮ್ಮ ಹೆಸರು ಶಾಶ್ವತಗೊಳಿಸಬೇಕೆಂದು ಬಯಸುವರೇ ಆಗಿದ್ದಾರೆ. "ರಕ್ತ ಸಾಕ್ಷಿಗಳು ಮರಣಹೊಂದುವುದಿಲ್ಲ. ಅವರು ಎಂದೆಂದೂ ಜೀವಿಸಿರುತ್ತಾರೆ" ಎಂದು ಹೇಳುವವರ ಹೃದಯಗಳಲ್ಲಿ ಅಮರತ್ವದ ಆಗ್ರಹವಿರುವುದೆಂದು ಬಿಡಿಸಿ ಹೇಳಬೇಕಾಗಿಲ್ಲ ತಾನೇ..?

ತನ್ನ ಆಯುಸ್ಸನ್ನೂ ಮೀರಿ ಫಲ ನೀಡಬಲ್ಲ ಕರ್ಮಗಳನ್ನು ಪ್ರವರ್ತಿಸುವ ಸಾಮರ್ಥ್ಯವಿರುವ ಏಕೈಕ ಜೀವಿ ಮನುಷ್ಯನೇ ಆಗಿದ್ದಾನೆ. ಇತರ ಜೀವಿಗಳಾದರೂ ಅವುಗಳ ಜೀವನಾವಧಿಗೆ ಸೀಮಿತ ಪ್ರತಿಫಲ ಲಭಿಸುವ ಕಾರ್ಯಗಳಷ್ಟೇ ಪ್ರವರ್ತಿಸಬಲ್ಲದು. ಮನುಷ್ಯನ ಕರ್ಮಗಳು ಹಾಗಲ್ಲ. ಅದು ಸತ್ಕರ್ಮವಾದರೂ, ದುಷ್ಕರ್ಮವಾದರೂ ಅದರ ಪರಿಣಾಮಗಳು ಅವನ ಜೀವನಾವಧಿಯನ್ನು ಮೀರಿಕೊಂಡಿರುವುದು. ರೇಡಿಯೊ ಕಂಡು ಹಿಡಿದ ವಿಜ್ಞಾನಿಯ ಕರ್ಮದ ಸತ್ಫಲವನ್ನೂ ಅಣುಬಾಂಬ್ ಕಂಡು ಹಿಡಿದ ವಿಜ್ಞಾನಿಯ ಕರ್ಮದ ದುಷ್ಫಲವನ್ನೂ ನೂರಾರು ವರ್ಷಗಳ ನಂತರವೂ ಜಗತ್ತು ಅನುಭವಿಸಿಕೊಂಡಿರುತ್ತದೆ. ಮನುಷ್ಯನ ಕರ್ಮಗಳಿಂದ ಭೂಮಿಯಲ್ಲಿ ಉಂಟಾಗುವ ಪರಿಣಾಮ ಅನಶ್ವರವಾಗಿದ್ದರೆ ಅದನ್ನು ಮಾಡಿದ ಮನುಷ್ಯನಿಗೆ ಲಭಿಸುವ ಪ್ರತಿಫಲವೂ ಅನಶ್ವರವಾಗಿರಬೇಕು ತಾನೇ? ಈ ಪ್ರಶ್ನೆಗೆ ಸಾಮಾನ್ಯ ಬುದ್ಧಿ ಕೂಡಾ ನೀಡುವ ಸರಳ ಉತ್ತರ `ಹೌದು' ಎಂದಾಗಿದೆ. ದೂರಗಾಮಿ ಪ್ರತಿಫಲ ನೀಡುವ ದೃಷ್ಟಿಕೋನದ ಮನುಷ್ಯನ ಪ್ರವೃತ್ತಿಗಳಿಗೆ ದೂರಗಾಮಿ ಪ್ರತಿಫಲ ಲಭಿಸಬೇಕೆನ್ನುವುದು ಬುದ್ಧಿಯ ಬೇಡಿಕೆಯೇ ಆಗಿದೆ.

ಮರಣಾನಂತರದ ಜೀವನವು ಮನುಷ್ಯ ಬುದ್ಧಿಯ ಸ್ವಾಭಾವಿಕವಾದ ನಿರೀಕ್ಷೆಗಳಲ್ಲಿ ಒಂದಾಗಿದೆ. ಚರಿತ್ರೆ ದಾಖಲಿಸಲ್ಪಡುವುದಕ್ಕೂ ಹಿಂದಿನ ಕಾಲದಲ್ಲಿ ಕೂಡಾ ಜನರಲ್ಲಿ ಮರಣಾನಂತರ ಜೀವನದ ಕುರಿತು ವಿಶ್ವಾಸ ನೆಲೆಗೊಂಡಿತ್ತೆನ್ನುವುದನ್ನು ಅಧ್ಯಯನಗಳು, ಸಂಶೋಧನೆಗಳು ಬಹಿರಂಗ

ಪಡಿಸುತ್ತದೆ. ಮರಣದೊಂದಿಗೆ ಎಲ್ಲವೂ ಸರಿಸಮಾಪ್ತಿಯಾಗುತ್ತದೆನ್ನುವುದು ಸತ್ಯವೆಂದಾದರೆ ಒಳಿತು, ಸತ್ಯ, ಪರೋಪಕಾರ, ಸೇವೆ ಮುಂತಾದವುಗಳಿಗೆ ಯಾವುದೇ ಮೌಲ್ಯವಿಲ್ಲವೆಂದಾಗುತ್ತದೆ. ಕೆಡುಕನ್ನು, ಅಕ್ರಮವನ್ನು ಪ್ರವರ್ತಿಸುತ್ತಾ ಈ ಕ್ಷಣಿಕ ಜೀವನವನ್ನು ಅಹ್ಲಾದಕರವಾಗಿ ಮಾಡಲು ಪರಿಶ್ರಮಿಸುವವರೊಂದಿಗೆ ಅದು ಸರಿಯಲ್ಲವೆನ್ನಲು ಅವಕಾಶವಿರುವುದಿಲ್ಲ. ಆದ್ದರಿಂದಲೇ ಮರಣದ ನಂತರವೂ ಒಂದು ಜೀವನವಿರಲೇ ಬೇಕೆನ್ನುವುದನ್ನು ಬುದ್ಧಿಯು ಸಮರ್ಥಿಸುತ್ತದೆ. ಇಲ್ಲಿ ಕೈಗೊಂಡ ಸತ್ಕಾರ್ಯಗಳಿಗೆ ತಕ್ಕ ಪ್ರತಿಫಲವೂ, ದುಷ್ಕರ್ಮಗಳಿಗೆ ತಕ್ಕ ಶಿಕ್ಷೆಯೂ ಅನುಭವಿಸುವಂತಹಾ ಒಂದು ಜೀವನ. ಅದಿಲ್ಲವೆಂದರೆ ಮನುಷ್ಯನೆನ್ನುವ ಉತ್ಕೃಷ್ಟ ಜೀವಿಯ ಜೀವನಕ್ಕೆ ಯಾವುದೇ ಬೆಲೆ ಇರುವುದಿಲ್ಲ. ಪ್ರಸ್ತುತ ಜೀವನದ ಆಗ್ರಹಗಳೆಲ್ಲವೂ ಅಲ್ಲಿ ಸಫಲೀಕರಣಗೊಳ್ಳಬೇಕು. ಅಂದರೆ ಮರಣಾನಂತರದ ಜೀವನವು ಅನಶ್ವರವಾಗಿರಬೇಕು.

ಅನಶ್ವರವಾದ ಜೀವನ ಒಂದು ಮರಣಾನಂತರವಿರುವುದಾದರೆ, ಆ ಜೀವನದ ಸುಖ ಮತ್ತು ಸಂತೃಪ್ತಿಯೇ ನಿಜವಾದ ಸುಖ ಮತ್ತು ಸಂತೃಪ್ತಿಯಾಗಿರುವುದು. ಆ ಜೀವನದ ಆಹ್ಲಾದವೇ ವಾಸ್ತವದಲ್ಲಿ ಆಹ್ಲಾದವೆನಿಸುವುದು. ಅಲ್ಲಿಯ ಕಷ್ಟ-ನಷ್ಟಗಳೇ ಯತಾರ್ಥದಲ್ಲಿ ಕಷ್ಟ-ನಷ್ಟವಾಗಿರುವುದು. ಆದ್ದರಿಂದ ಮನುಷ್ಯನು ತನ್ನ ಮರಣಾನಂತರದ ಶಾಶ್ವತವಾದ ಜೀವನವನ್ನು ಯಶಸ್ವಿಗೊಳಿಸುವುದನ್ನೇ ಈ ಜೀವನದ ಗುರಿಯಾಗಿ ಅಂಗೀಕರಿಸಿಕೊಳ್ಳಬೇಕಾಗಿದೆ. ಈ ಜೀವನವು ಕ್ಷಣಿಕವಾಗಿದ್ದು ಇಲ್ಲಿನ ಸುಖ ಮತ್ತು ದುಃಖಗಳು ಕೂಡಾ ಕ್ಷಣಿಕವೇ ಆಗಿರುವುದು. ಇಲ್ಲಿ ಸ್ವಲ್ಪ ಸಹನೆ, ತ್ಯಾಗ ಕೈಗೊಂಡರೆ ಮರಣಾನಂತರದ ಜೀವನದಲ್ಲಿ ಅಪಾರ ಸುಖ ಲಭಿಸುವುದೆಂಬ ರೀತಿಯಲ್ಲಿ ಮನುಷ್ಯನು ಅವರ ಜೀವನವನ್ನು ರೂಡೀಕರಿಸಿಕೊಳ್ಳಬೇಕು. ಮರಣಾ ನಂತರದ ಶಾಶ್ವತ ಜೀವನದ ಕುರಿತು ವಿಶ್ವಾಸವಿಡುವ ಓರ್ವನ ಮಟ್ಟಿಗೆ ಅವನ ಈ ಜೀವನವು ಕೇವಲ ಒಂದು ಕೃಷಿ ಸ್ಥಳವಾಗಿರುವುದು. ಆದ್ದರಿಂದಲೇ ಆ ಮನುಷ್ಯನ ಜೀವನವು ಸತ್ಕರ್ಮಗಳಿಂದಲೂ-ಸದಾಶಯಗಳಿಂದಲೂ, ತುಂಬಿರುವುದು. ಸದಾ ಅವನಲ್ಲಿ ಪರಲೋಕದ ಕುರಿತಾದ ಚಿಂತೆ ಮನೆ ಮಾಡಿಕೊಂಡಿರುವುದು.

ಮರಣಾನಂತರ ಒಂದು ಜೀವನವಿರಲೇಬೇಕೆಂದು ಮನುಷ್ಯನ ಮನಸ್ಸು ಅಪೇಕ್ಷಿಸುತ್ತದೆನ್ನುವುದು ಸತ್ಯವಾಗಿದೆ. ಆದರೆ ಅಂತಹಾ ಒಂದು ಜೀವನವಿದೆ ಎನ್ನುವುದಕ್ಕೆ ಆಧಾರವೇನಾದರೂ ಇದೆಯೇ? ಈ ಲೋಕದಲ್ಲಿ ಕೈಗೆಟಕುವ ಸುಖ-ಸೌಕರ್ಯಗಳನ್ನು ತ್ಯಜಿಸಿ ಮರಣಾನಂತರದ ಸುಖಕ್ಕಾಗಿ ಪರಿತಪಿಸುವುದು ಕೊನೆಗೆ ವ್ಯರ್ಥ ಪರಿಶ್ರಮವಾಗಿ ಬಿಟ್ಟರೆ? ಮರಣ ಹೊಂದಿದವರಾರೂ ಮರಳಿ ಬಾರದೇ ಇರುವುದರಿಂದ ಮರಣೋತ್ತರ ಜೀವನಕ್ಕಾಗಿ ಈ ಜೀವನದ ಸುಖವನ್ನು ನಷ್ಟಪಡಿಸಿಕೊಳ್ಳುವವರು ಮೂರ್ಖರೆನಿಸಲಾರರೇ? ಎಂಬುವುದೆಲ್ಲಾ ಸ್ವಾಭಾವಿಕವಾದ ಪ್ರಶ್ನೆಗಳೇ ಆಗಿದೆ. ಮರಣಾ ನಂತರದ ಜೀವನದ ಕುರಿತು ಕಲಿಯಲು ವೈಜ್ಞಾನಿಕವಾದ ಮಾರ್ಗಗಳನ್ನು ಅವಲಂಬಿಸಲು ಸಾಧ್ಯವಿಲ್ಲ. ಏಕೆಂದರೆ ವೈಜ್ಞಾನಿಕ ಸಂಶೋಧನೆಗಳಾವುದೂ ಈ ತನಕ ಮರಣದ ಕುರಿತಾಗಿಯೆ ಸ್ಪಷ್ಟ ವಿವರಣೆ ನೀಡಲು ಯಶಸ್ವಿಯಾಗಿಲ್ಲ. ಆದ್ದರಿಂದ ಅವುಗಳನ್ನು

ಅವಲಂಬಿಸುವುದರಿಂದ ಪ್ರಯೋಜನವಿಲ್ಲ. ಈ ಪ್ರಪಂಚದ ಕುರಿತು ಕಲಿಯಲು ರೂಪೀಕರಿಸಲ್ಪಟ್ಟ ವಿಜ್ಞಾನ ಮತ್ತು ಸಿದ್ಧಾಂತಗಳನ್ನು ಉಪಯೋಗಿಸಿಕೊಂಡು ಈ ಪ್ರಪಂಚಕ್ಕೆ ಅತೀತವಾದ ಒಂದು ಕಾರ್ಯವನ್ನು ಮನವರಿಕೆ ಮಾಡಿಕೊಳ್ಳುವುದು ಅಸಾಧ್ಯವೆನ್ನುವುದು ಸಾಮಾನ್ಯ ಬುದ್ದಿಯೂ ಸಮ್ಮತಿಸುವ ಒಂದು ಸಂಗತಿಯಾಗಿದೆ. ಹಾಗಿದ್ದರೆ ಮರಣಾ ನಂತರದ ಜೀವನದ ಕುರಿತಾದ ಸತ್ಯಾಸತ್ಯತೆಯನ್ನು ನಾವು ಮನವರಿಕೆಯ ಮಾಡಿಕೊಳ್ಳುವುದು ಹೇಗೆ?

ಮರಣಾ ನಂತರ ಒಂದು ಜೀವನವಿರುವುದಾದರೆ ಅದಕ್ಕೊಂದು ವ್ಯವಸ್ಥಾಪಕನೂ ಇರಬೇಕಲ್ಲವೇ? ಆ ವ್ಯವಸ್ಥಾಪಕನಲ್ಲೇ ಆ ಜೀವನದ ನಿಯಂತ್ರಣ ಕೇಂದ್ರೀಕರಣಗೊಂಡಿರುವುದು. ಈ ಲೋಕದ ಕರ್ಮಗಳನ್ನು ತೂಗಿ ಅದಕ್ಕೆ ತಕ್ಕ ಪ್ರತಿಫಲ ನೀಡುವವನೂ ಅವನೇ ಆಗಿರುತ್ತಾನೆ. ಮರಣಾ ನಂತರದ ಜೀವನದ ವ್ಯವಸ್ಥಾಪಕನೇ ಪ್ರಸ್ತುತ ಜೀವನದ ಕುರಿತು ನಮಗೆ ತಿಳಿಸಿಕೊಡಬೇಕಲ್ಲದೆ ಇನ್ನಾವ ಮಾರ್ಗದಿಂದಲೂ ಪರಲೋಕ ಜೀವನದ ಕುರಿತು ಅರಿಯಲು ನಮಗೆ ಸಾಧ್ಯವಿಲ್ಲ. ಪರಲೋಕದ ವಿಧಿನಿರ್ಣಯದಿನದ ಅಧಿಪತಿಯಿಂದ ಆ ದಿನದ ಕುರಿತು ಏನಾದರೂ ಅರಿವು ಮಾನವ ರಾಶಿಗೆ ಲಭ್ಯವಾಗಿದೆಯೇ? ಎನ್ನುವುದನ್ನು ಪರಿಶೋಧಿಸುವುದು ನಮ್ಮ ಮೇಲಿನ ಬಾಧ್ಯತೆಯಾಗಿದೆ. ನಾವು ನಮ್ಮೀ ಬಾಧ್ಯತೆಯನ್ನು ನಿರ್ವಹಿಸದೇ ಅವಗಣಿಸಿದರೆ ಶಾಶ್ವತವಾದ ನಷ್ಟಕ್ಕೆ ಗುರಿಯಾಗುತ್ತೇವೆನ್ನುವ ವಿಷಯದಲ್ಲಿ ಸಂಶಯವಿಲ್ಲ.

## ವಿವಿದ ಧರ್ಮಗಳಲ್ಲಿ ಮರಣೋತ್ತರ ಜೀವನ

ಎಲ್ಲಾ ಧರ್ಮಗಳಲ್ಲೂ ಸಾಮಾನ್ಯವಾಗಿ ಕಂಡು ಬರುವ ತತ್ವಗಳಲ್ಲಿ ಒಂದಾಗಿದೆ ಪರಲೋಕ ವಿಶ್ವಾಸವೆನ್ನುವುದು ಅಧ್ಯಯನಗಳಿಂದ ಕಂಡುಕೊಳ್ಳಬಹುದಾಗಿದೆ. ವಿವರಣೆಗಳಲ್ಲಿ ವ್ಯತ್ಯಾಸವಿದ್ದರೂ ಪರಲೋಕ ವಿಶ್ವಾಸದ ಕುರಿತು ವಿಶ್ವಾಸವು ಎಲ್ಲಾಧರ್ಮಗಳಲ್ಲೂ ನೆಲೆಗೊಂಡಿರುತ್ತದೆ. ಅಧ್ಯಯನದ ಆಳಕ್ಕಿಳಿದಂತೆ ಈ ವಿವರಣೆಗಳಲ್ಲಿನ ವ್ಯತ್ಯಾಸವು ನಂತರದ ಕಾಲದಲ್ಲಿ ಉಂಟಾಗಿರುವುದೆಂದೂ, ಸಾಮಾನ್ಯವಾಗಿ ಎಲ್ಲಾ ಮತಧರ್ಮಗಳ ಉದ್ಭವದ ಕಾಲದಲ್ಲಿ ಒಂದೇ ರೀತಿಯ ವಿಶ್ವಾಸವು ಪರಲೋಕದ ಕುರಿತು ನೆಲೆ ನಿಂತಿದ್ದವೆಂದು ವ್ಯಕ್ತವಾಗುತ್ತದೆ. ಮರಣದ ನಂತರ ಏನು ಸಂಭವಿಸುತ್ತದೆನ್ನುವ ಕುರಿತು ಎಲ್ಲಾ ಪ್ರವಾದಿಗಳು ಹೇಳಿರುವ ಮಾತನ್ನು ಈ ರೀತಿ ಸಂಕ್ಷೇಪಿಸಬಹುದಾಗಿದೆ. "ಮನುಷ್ಯನ ಜೀವನವು ಅವನ ಮರಣದೊಂದಿಗೆ ಮುಗಿಯುವುದಿಲ್ಲ. ಶಾಶ್ವತವಾದ (ಪರಲೋಕ) ಜೀವನ ಒಂದು ಅಲ್ಲಿಂದಲೇ ಆರಂಭವಾಗುತ್ತದೆ. ಒಳಿತು ಮತ್ತು ಕೆಡುಕುಗಳಿಗೆ ತಕ್ಕ ಪ್ರತಿಫಲವು ಅಲ್ಲಿ ಲಭಿಸುವುದು."

ಸೃಷ್ಟಿಕರ್ತನು, ಪರಿಪಾಲಕನೂ ಆದ ಸರ್ವಶಕ್ತನು ನೀಡಿದ ನಿರ್ದೇಶನಗಳನ್ನು ಅಂಗೀಕರಿಸಿಕೊಂಡು ಜೀವಿಸುವುದು ಮರಣಾನಂತರ ಜೀವನದ ಶಾಶ್ವತ ವಿಜಯಕ್ಕಿರುವ ಮಾರ್ಗವಾಗಿದೆ. ಸತ್ಯವಿಶ್ವಾಸಿಗಳ ಆಶೆ, ಅಭಿಲಾಶೆಗಳು, ನಿರೀಕ್ಷೆ ಮತ್ತು ಸಂಕಲ್ಪಗಳೆಲ್ಲವೂ ಸಾಕ್ಷಾತ್ಕರಿಸುವ ಪರಲೋಕದಲ್ಲಿ ಸತ್ಯ ನಿಷೇಧ ಪ್ರಕಟಿಸಿ ಜೀವಿಸುವವರಿಗೆ ಕಠಿಣ ಶಿಕ್ಷೆಯನ್ನೂ ನೀಡಲಾಗುವುದು.

ಗತ ಪ್ರವಾದಿಗಳು, ಭಾರತೀಯ ಋಷಿಗಳೆಲ್ಲವೂ ಮರಣೋತ್ತರ ಜೀವನದ ಕುರಿತು ಸವಿವರವಾಗಿ ಕಲಿಸಿರುವುದಾಗಿ ಕಂಡು ಬರುತ್ತದೆ. ಸತ್ಯವಿಶ್ವಾಸಿಗಳು ಪ್ರವೇಶಿಸಲಿರುವ ಸ್ವರ್ಗಲೋಕದ ಕುರಿತು, ದುಷ್ಪ್ರವರ್ತಕರಿಗಾಗಿ ಸೃಷ್ಟಿಸಲಾದ ನರಕದ ಕುರಿತು ವಿವರಿಸದ ಒಂದೇ ಒಂದು ಪ್ರವಾದಿಯೂ ಲೋಕದಲ್ಲಿ ಗತಿಸಿ ಹೋಗಿಲ್ಲವೆನ್ನುವುದು ಸತ್ಯವೇ ಆಗಿದೆ.

## ಪರಲೋಕ ಮತ್ತು ಪುನರ್ಜನ್ಮ

ಮರಣದ ಬಳಿಕ ಒಂದು ಜೀವನವಿದೆಯೆಂದೂ, ಈ ಜೀವನದಲ್ಲಿ ಸತ್ಕರ್ಮ ಕೈಗೊಂಡವರು ಮರಣೋತ್ತರ ಜೀವನದಲ್ಲಿ ಸ್ವರ್ಗ ಸುಖ ಅನುಭವಿಸುತ್ತಾರೆಂದೂ, ಈ ಜೀವನದಲ್ಲಿ ದುಷ್ಕಾರ್ಯಗಳನ್ನು ಪ್ರವರ್ತಿಸಿದವನು ಅಲ್ಲಿ ಅಂಧಕಾರದಲ್ಲಿ ಬಿದ್ದು ನರಕ ಯಾತನೆ ಅನುಭವಿಸುವನೆಂದೂ ವೇದಗಳ ಕಾಲದ ಋಷಿ-ಮುನಿಗಳು ವಿಶ್ವಾಸವಿರಿಸುತ್ತಿದ್ದರೆನ್ನುವುದನ್ನು ಚತುರ್ವೇದಗಳ ಕುರಿತಾದ ಪರಾಮರ್ಶೆಗಳಿಂದ ಮನವರಿಕೆ ಮಾಡಿಕೊಳ್ಳಬಹುದಾಗಿದೆ. ವೇದ ಪಂಡಿತ ಶ್ರೀ ರಾಹುಲ್ ಸಾಂಕೃತ್ಯಾಯನ್ ಬರೆಯುವುದು ನೋಡಿ "ವೇದದ ಋಷಿಗಳು ಈ ಲೋಕಕ್ಕೆ ಭಿನ್ನವಾದ ಮತ್ತೊಂದು ಲೋಕವಿದೆಯೆಂದು ವಿಶ್ವಾಸವಿರಿಸಿದ್ದರು. ಸತ್ಕರ್ಮಿಗಳು ಅವರ ಮರಣದ ನಂತರ ಅಲ್ಲಿಗೇ ತೆರಳುವರು. ಅಲ್ಲಿ ಅವರು ಸುಖ-ಸಂತೋಷದಿಂದ ಬಾಳುವರು. ಕೆಳಗಿರುವ ಪಾತಾಳವು ಅಂಧಕಾರ ಕವಿದ ನರಕ ಲೋಕವಾಗಿದೆ. ದುಷ್ಕರ್ಮಿಗಳು ಅಲ್ಲಿಗೇ ತೆರಳುತ್ತಾರೆ"

(ರಾಹುಲ್ ಸಾಂಕೃತ್ಯಾಯನ್ ವಿಶ್ವದರ್ಶನಗಳು ಪುಟ 552)

ಮರಣೋತ್ತರ ಜೀವನದಲ್ಲಿ ಸತ್ಕರ್ಮಿಗಳಿಗೆ ಸ್ವರ್ಗವೂ ದುಷ್ಕರ್ಮಿಗಳಿಗೆ ನರಕವೂ ದೊರೆಯುವುದೆಂಬ ವೈದಿಕ ವಿಶ್ವಾಸಕ್ಕೆ ವಿರುದ್ಧವಾದ ಪುನರ್ಜನ್ಮದ ಆಶಯದ ಆರಂಭವಾಗಿದ್ದು ವರ್ಣಾಶ್ರಮ ವ್ಯವಸ್ಥೆಗೆ ಹೊಂದಿಕೊಂಡಿದ್ದಾಗಿದೆ. ಶೂದ್ರರು, ದರಿದ್ರರು ಅನುಭವಿಸುವ ಕಷ್ಟ-ಕಾರ್ಪಣ್ಯಗಳಿಗೆಲ್ಲಾ ಅವರ ಹಿಂದಿನ ಜನ್ಮದ ಪಾಪವೇ ಕಾರಣವೆಂಬ ವಿಶ್ವಾಸದ ಮುದ್ರೆಯನ್ನು ಅವರ ಮನಸ್ಸಿನಲ್ಲಿ ಅಚ್ಚೊತ್ತಿಕೊಂಡು ಸವರ್ಣೀಯರು ಮೇಲ್ಮೆ ಸಾಧಿಸಲು ವರ್ಣಾಶ್ರಮದ ಪುರೋಹಿತರು ಸೃಷ್ಟಿಸಿದ ಒಂದು ವಿಶ್ವಾಸವಾಗಿದೆ ಪುನರ್ಜನ್ಮವೆಂಬ ಆಶಯ. ಈ ವಿಷಯವು ಪುನರ್ಜನ್ಮದ ಕುರಿತು ಪ್ರತಿಪಾದಿಸುವ ಚಂದೊಗ್ಯೋಪನಿಶತ್‌ನ ಸೂಕ್ತದಲ್ಲಿ ಸುಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಅದು ಈ ರೀತಿ ಇದೆ. **"ತದ್ಯ ಇಹ ರಮನೀಯ ಚರಣಾ ಅಬ್ಯಾಶಃ ಯತೇ ರಮಣೀಯಂ ಯೋನಿಂ ಆಪದ್ಯೇರನ್ ಬ್ರಾಹ್ಮಣಯೋನಿಂ ವ ಕ್ಷತ್ರಿಯೋನಿಂ ವಾ ವೈಶ್ಯಯೋನಿಂ ವಾ ಅತಯಾ ಇಹ ಕಪುಯ ಚರಣ ಅಬ್ಯಾಸಃ ಹಯತ್ತೇ ಕಪ್ರುಯಾಂ ಯೋನಿಂ ಆಪದ್ಯೇರನ್ ಶ್ವಾಯೋನಿಂ ವಾ ಸುಕರ ಯೋನಿಂ ವಾ ಚಂಡಾಲ ಯೋನಿಂ ವಾ"** ಅರ್ಥಾತ್ "ಇವರಲ್ಲ ಪುಣ್ಯ ಕರ್ಮಿಗಳಾದವರು ಅವರ ಸುಕರ್ಮಗಳ ನಿಮಿತ್ತ ಬ್ರಾಹ್ಮಣ ಯೋನಿಯಲ್ಲೊ ಕ್ಷತ್ರಿಯ ಯೋನಿಯಲ್ಲೊ ವೈಶ್ಯಯೋನಿಯಲ್ಲೊ ಜನಿಸುತ್ತಾರೆ. ದುಷ್ಕರ್ಮಿಗಳು ಶೀಘ್ರವೇ ನೀಚಯೋನಿಗಳಲ್ಲಿ ಅಂದರೆ ಹಂದಿಗಳದ್ದೊ ನಾಯಿಗಳದ್ದೊ ಚಂಡಾಳರ(ಕೀಳ್ಜಾತಿ) ಯೋನಿಗಳಲ್ಲೊ ಜನಿಸುತ್ತಾರೆ' (ಚಂದೋಗ್ಯೋಪನಿಷತ್ 5-10:7)

ಈ ಶ್ಲೋಕದಲ್ಲಿ ಹಂದಿಗಳು ನಾಯಿಗಳು ಮತ್ತು ಚಂಡಾಳರು(ಚತುರ್ವರ್ಣದಲ್ಲಿ ಒಳಪಡದವರು) ಹಿಂದಿನ ಜನ್ಮದ ಪಾಪಕರ್ಮಗಳ ಫಲವನ್ನು ಅನುಭವಿಸುತ್ತಿದ್ದಾರೆನ್ನುವುದನ್ನು ಸಮರ್ಥಿಸಲಾಗಿದೆ. ಚಂಡಾಳನು ಹಂದಿ ಮತ್ತು ನಾಯಿಗಳಿಗೆ ಸಮಾನನೆಂದು ಪರಿಗಣಿಸಲಾಗಿದೆ. ಪುನರ್ಜನ್ಮ ವಿಶ್ವಾಸವು ಸವರ್ಣಿಯ ಪುರೋಹಿತರ ಮೆದುಳಿನ ಸೃಷ್ಟಿಯಲ್ಲದೆ ಮತ್ತೇನೂ ಅಲ್ಲ.

ವೇದಗಳ ಕಾಲದ ಋಷಿ-ಮುನಿಗಳು ಮರಣೋತ್ತರ ಜೀವನದಲ್ಲಿ ಸ್ವರ್ಗ-ನರಕಗಳಿರುವುದೆಂಬ ವಿಶ್ವಾಸವಿಟ್ಟುಕೊಂಡಿದ್ದರೆಂದು ಈ ಮೊದಲೇ ಹೇಳಲಾಗಿದೆ. ವೇದಗಳ ಕಾಲಘಟ್ಟದ ಈ ವಿಶ್ವಾಸದ ಕುರಿತು ಕೆಲವು ಉಪನಿಷತ್ತುಗಳಲ್ಲಿ ಉಲ್ಲೇಖಗಳಿರುವುದನ್ನು ಕಾಣಬಹುದಾಗಿದೆ. ದುಃಖರಹಿತವಾದ ಸ್ವರ್ಗಲೋಕದ ಕುರಿತು ಯಾತನಾಮಯವಾದ ನರಕಲೋಕದ ಕುರಿತು ವಿವರಿಸುವ ಕೆಲವು ಉಪನಿಷತ್‌ನ ಸೂಕ್ತಿಗಳನ್ನು ನೋಡಿರಿ.

**'ಅಸೂರ್ಯಾ ನಾಮತೆ ಲೋಕಾ ಅಂದೇನಾ ತಮಸಾವೃತಃ ತಾಂ ಸ್ತೇ ಪ್ರೇತ್ಯಾಭಿಗಚ್ಛಂತಿಯೇ ಕೇ ಚಾದ್ ಮಹನೋಜನಾಃ'** (ಸೂರ್ಯ ನಿಲ್ಲದ ಆ ಲೋಕಗಳು ಅಜ್ಞಾನಾಂದಕಾರಕ್ಕೆ ತುಲ್ಯವಾಗಿರುವುದು. ಆತ್ಮ ದ್ರೋಹಿಗಳು ಅಥವಾ ದೇವನನ್ನು ಸ್ಮರಿಸದೆ ವಿಷಯಾಸಕ್ತರಾಗಿ ಜೀವಿಸುವವರು ದುಃಖಯಾತನೆಗಳ ಗೂಡಾಗಿರುವ ಆ ಲೋಕವನ್ನು ಪ್ರವೇಶಿಸುವರು) (ಈಶಾವ ಸ್ಯೋಪಷತ್ 3)

**''ಸ್ವರ್ಗಲೋಕೇ ನಭಯಂ ಕಿಂಚನಾಸ್ತಿ ನತತ್ರತ್ವಂ ನಜರಯಾ ಬಿ ಭೇತಿ ಊಭೇ ತೀರ್ತ್ವಾಶನಾಯ ಪಿಪಾಸೇ ಶೊಖಾತಿಗೊ ಮೋಧತೇ ಸ್ವರ್ಗಲೊಕೇ** (ಸ್ವರ್ಗ ಲೋಕವು ಭೀತಿಕಾರಕವಲ್ಲ. ಅಲ್ಲಿ ಮರಣ ಭಯವೂ ಇಲ್ಲ. ಅಲ್ಲಿ ವೃದ್ಧಾಪ್ಯವೂ ಕಾಡದು ಅಲ್ಲಿ ಮಾನವನು ಹಸಿವು ಬಾಯಾರಿಕೆಗಳಿಂದ ಪಾರಾಗಿ ಶೋಖಮುಕ್ತನಾಗಿ ಆನಂದವನ್ನು ಸವಿಯುತ್ತಾನೆ'' (ಕಠೋಪನಿಷತ್ 1/1/12)

## ಏಸುವಿನ ಉಪದೇಶ?

ಮರಣೋತ್ತರ ಜೀವನದಲ್ಲಿ ಮೋಕ್ಷ ಸಂಪಾದಿಸುವ ಸಲುವಾಗಿ ಐಹಿಕ ಸುಖಗಳನ್ನು ಪರಿತ್ಯಜಿಸುವುದು ತಪ್ಪಲ್ಲ ಎಂದಾಗಿದೆ ಏಸುಕ್ರಿಸ್ತರು ಕಲಿಸಿರುವುದು. ಅವರ ಉಪದೇಶಗಳನ್ನು ಗಮನಿಸಿರಿ.

"ನೀವು ಭೂಮಿಯಲ್ಲಿ ನಿಮಗಾಗಿ ಸಂಪತ್ತನ್ನು ನಿಕ್ಷೇಪಿಸಬೇಡಿರಿ. ಅಲ್ಲಿ ಅದನ್ನು ಕೀಟಗಳು-ಇರುವೆಗಳು ತಿಂದು ನಾಶಪಡಿಸುತ್ತದೆ. ಕಳ್ಳರು ಅಪಹರಿಸಿಕೊಂಡೊಯ್ಯುತ್ತಾರೆ. ಕ್ರಿಮಿ ಕೀಟಗಳು ತಿಂದು ಅಳಿಸದ, ಕಳ್ಳರು ಅಪಹರಿಸದ ಸ್ವರ್ಗದಲ್ಲಿ ನಿಮಗಾಗಿ ನಿಮ್ಮ ಸಂಪತ್ತನ್ನು ನಿಕ್ಷೇಪಿಸಿರಿ. ಏಕೆಂದರೆ, ನಿಮ್ಮ ಸಂಪತ್ತು ಎಲ್ಲಿರುವುದೊ ನಿಮ್ಮ ಹೃದಯವೂ ಅಲ್ಲಿಯೇ ಇರುವುದು.''

(ಮತಾಯ 6: 19-21)

"ಜನರು ನನ್ನ ಕಾರಣ ನಿಮ್ಮನ್ನು ಧೂಷಿಸುತ್ತಲೂ-ಪಿಡಿಸುತ್ತಲೂ, ಸತ್ಯಕ್ಕೆ ವ್ಯತಿರಿಕ್ತವಾದ ದೋಷಾರೋಪಗಳನ್ನು ಹೊರಿಸುತ್ತಲೂ ಇದ್ದಾಗ ನೀವು ಸಹನೆ ಕೈಗೊಳ್ಳಿರಿ. ನೀವು ಸೌಭಾಗ್ಯವಂತರಾಗಿದ್ದೀರಿ. ನೀವು ಸಂತೋಷಗೊಳ್ಳಿರಿ. ಏಕೆಂದರೆ ಸ್ವರ್ಗದಲ್ಲಿ ನಿಮಗೆ ಇದಕ್ಕೆ ಹಿರಿಯ

ಪ್ರತಿಫಲವಿರುವುದು. ನಿಮಗಿಂತ ಹಿಂದಿನ ಪ್ರವಾದಿಗಳನ್ನು ಜನರು ಈ ರೀತಿಯಲ್ಲೇ ಪೀಡಿಸಿದ್ದಾರೆ''(ಮತ್ತಾಯ : 5:12)

“ನೀನು ಪಾಪ ಪ್ರವರ್ತಿಸಲು ನಿನ್ನ ಕೈ ಕಾರಣವೆಂದಾದೆ ಅದನ್ನು ಕತ್ತರಿಸಿ ಬಿಡು. ಎರಡು ಕೈಗಳೊಂದಿಗೆ ನರಕದ ಭೀಕರ ಅಗ್ನಿಯ ಜ್ವಾಲೆಯಲ್ಲಿ ಬೀಳುವುದಕ್ಕಿಂತ ಅಂಗವಿಕಲನಾಗಿ ಜೀವಿಸುವುದೇ ಉತ್ತಮವಾಗಿದೆ. ನೀನು ಪಾಪ ಮಾಡಲು ನಿನ್ನ ಕಾಲು ಕಾರಣವೆಂದಾದರೆ ಅದನ್ನು ಕತ್ತರಿಸಿ ಬಿಡು. ಎರಡು ಕಾಲುಗಳೊಂದಿಗೆ ನರಕಕ್ಕೆ ದಬ್ಬಲ್ಪಡುವುದಕ್ಕಿಂತ ನೆಲದಲ್ಲಿ ಹೊಟ್ಟೆ ಎಳೆದುಕೊಳ್ಳುತ್ತಾ ಜೀವಿಸುವುದು ಉತ್ತಮವಾಗಿದೆ. ನೀನು ಪಾಪ ಪ್ರವರ್ತಿಸಲು ನಿನ್ನ ಕಣ್ಣುಗಳೇ ಕಾರಣವಾಗುತ್ತದೆಂದಾದರೆ ಅದನ್ನು ಕಿತ್ತು ಎಸೆದು ಬಿಡು. ಕಣ್ಣುಗಳೊಂದಿಗೆ ನರಕದ ತಳದಲ್ಲಿ ಬಿದ್ದು ಒದ್ದಾಡುವುದಕ್ಕಿಂತ ಅಂಧವಾಗಿ ಸ್ವರ್ಗಲೋಕ ಪ್ರವೇಶಿಸುವುದು ನಿನಗೆ ಉತ್ತಮವಾಗಿದೆ. ಆ ನರಕದಲ್ಲಿ ಅವರ ಜೀವವು ನಾಶವಾಗುವುದಿಲ್ಲ. ಬೆಂಕಿ ಆರುವುದೂ ಇಲ್ಲ. ಏಕೆಂದರೆ ಜನರೇ ಆ ಬೆಂಕಿಗೆ ಇಂದನವಾಗಿರುತ್ತಾರೆ. (ಮಾರ್ಕೋಸ್ 43-50)

## ಕುರ್‌ಆನಿನಲ್ಲಿ ಮರಣೋತ್ತರ ಜೀವನ

ಪರಿಶುದ್ಧ ಕುರ್‌ಆನ್ ಮರಣೋತ್ತರ ಜೀವನದ ಯಾತಾರ್ಥ್ಯವನ್ನು ಹೃದಯದಲ್ಲಿ ಪಡಿಮೂಡಿಸುವುದು ಮಾತ್ರವಲ್ಲದೆ ಸ್ವರ್ಗ ಸಂಪಾದಿಸಲು ಪರಿಶ್ರಮಿಸಬೇಕಾದ ಅವಶ್ಯಕತೆಯ ಕುರಿತು ಯುಕ್ತಿಪೂರ್ವಕ ಒತ್ತಿ-ಒತ್ತಿ ಹೇಳುತ್ತದೆ. ವಾಸ್ತವದಲ್ಲಿ ಪರಲೋಕ ಜೀವನದ ಕುರಿತು ಪರಿಶುದ್ಧ ಕುರ್‌ಆನಿನಂತೆ ವಿವರಣೆ ನೀಡುವ ಗ್ರಂಥ ಮತ್ತೊಂದಿಲ್ಲ. ಮರಣಾನಂತರದ ಜೀವನವನ್ನು ನಿಷೇಧಿಸುವವರಿಗೆ ಉತ್ತರ, ಪ್ರಸ್ತುತ ಜೀವನವನ್ನು ಸಮರ್ಥಿಸುವ ಪ್ರತಿಪಾದನೆಗಳು, ಮಾತ್ರವಲ್ಲ ಕುರ್‌ಆನಿನಲ್ಲಿರುವುದು, ಸ್ವರ್ಗಲೋಕದ ಆನಂದ ಪೂರ್ಣವಾದ ಅನುಭವಗಳು ನರಕದ ಯಾತನಾಮಯ ಅನುಭವಗಳ ಕುರಿತಾದ ಪರಾಮರ್ಶೆಗಳು ಕೂಡಾ ಕುರ್‌ಆನಿನಲ್ಲಿದೆ. ಬನ್ನಿ ಅವುಗಳಲ್ಲಿ ಕೆಲವನ್ನು ಅವಲೋಕಿಸೋಣ.

**“ಕಟ್ಟ ಕಡೆಗೆ ಪ್ರತಿಯೊಬ್ಬರಿಗೂ ಮರಣ ಹೊಂದಬೇಕಾಗಿದೆ ಮತ್ತು ನೀವೆಲ್ಲರೂ ನಿಮ್ಮ ನಿಮ್ಮ ಪ್ರತಿಫಲವನ್ನು ಪುನರುತ್ಥಾನದಿನದಂದು ಪಡೆಯುವವರಿದ್ದೀರಿ. ಅಲ್ಲಿ ನರಕಾಗ್ನಿಯಿಂದ ರಕ್ಷೆ ಹೊಂದುವವನೂ ಸ್ವರ್ಗದಲ್ಲಿ ದಾಖಲು ಮಾಡಲ್ಪಡುವವನೂ ನಿಜವಾದ ಕೃತಾರ್ಥನು. ಈ ಲೋಕದ ಜೀವನವಂತೂ ಕೇವಲ ಭ್ರಾಮಕ ಸಂಪತ್ತಾಗಿದೆ.''**(3-185)

**“ಪೈಗಂಬರರೇ, ಈ ಗ್ರಂಥದ ಮೇಲೆ ವಿಶ್ವಾಸವಿರಿಸಿ (ಅದರಂತೆ) ತಮ್ಮ ಕರ್ಮಗಳನ್ನು ಸರಿಪಡಿಸಿಕೊಳ್ಳುವವರಿಗಾಗಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿವೆ ಎಂಬ ಸುವಾರ್ತೆ ಕೊಡಿರಿ. ಆ ಉದ್ಯಾನಗಳ ಫಲಗಳು ಇಹಲೋಕದ ಫಲಗಳನ್ನು ಹೋಲುತ್ತಿರುವುವು. ಅವರಿಗೆ ಆ ಫಲಗಳನ್ನು ತಿನ್ನಲು ಕೊಡಲಾದಾಗ ಅವರು “ಇಂತಹಾ ಫಲಗಳೇ ಈ ಮುಂಚೆ ಭೂಲೋಕದಲ್ಲಿ ನಮಗೆ ಕೊಡಲಾಗುತ್ತಿದ್ದುವು ಎಂದು ಹೇಳುವರು. ಅವರಿಗೆ ಅಲ್ಲಿ ಪರಿಶುದ್ಧ ಪತ್ನಿಯರಿರುವರು ಮತ್ತು ಅವರು ಅಲ್ಲಿ ಸದಾ ಕಾಲ ಇರುವರು''**(2-25)

**"ಆ ಮಾರ್ಗದರ್ಶನವನ್ನು ಮಾನ್ಯ ಮಾಡಲು ನಿರಾಕರಿಸುವವರೂ ನಮ್ಮ 'ದೃಷ್ಟಾಂತಗಳನ್ನು ಸುಳ್ಳಾಗಿಸುವವರೂ ನರಕಾಗ್ನಿಯಲ್ಲಿ ಬೀಳುವವರಾಗಿದ್ದು ಅಲ್ಲಿ ಅವರು ಸದಾ ಕಾಲವೂ ಇರುವರು"** (2-39)

**"ಧರ್ಮನಿಷ್ಠೆಗೆ ವಾಗ್ದಾನ ಮಾಡಲಾಗಿರುವ ಆ ಸ್ವರ್ಗದ ವಿಶೇಷತೆಯೇನೆಂದರೆ, ಅದರಲ್ಲಿ ತಿಳಿ ನೀರಿನ ಕಾಲುವೆಗಳು ಹರಿಯುತ್ತಿರುವುವು. ಸ್ವಲ್ಪವೂ ರುಚಿ ಬದಲಾಗಿರದಂತಹ ಹಾಲಿನ ಕಾಲುವೆಗಳು ಹರಿಯುತ್ತಿರುವುವು. ಕುಡಿಯುವವರಿಗೆ ಅತ್ಯಂತ ರುಚಿಕರವಾಗಿರುವ ಮದಿರೆಯ ಕಾಲುವೆಗಳು ಹರಿಯುತ್ತಿರುವುವು, ಅತ್ಯಂತ ತಿಳಿಯಾದ ಜೇನಿನ ಕಾಲುವೆಗಳು ಹರಿಯುತ್ತಿರುವುವು. ಅದರಲ್ಲಿ ಅವರಿಗೆ ಎಲ್ಲಾ ಬಗೆಯ ಫಲಗಳಿರುವುದು ಮತ್ತು ಅವರ ಪ್ರಭುವಿನ ಕಡೆಯಿಂದ ಕ್ಷಮೆ ಇರುವುದು (ಇಂತಹ ಸ್ವರ್ಗ ಯಾರ ಪಾಲಿಗೆ ಬರಲಿದೆಯೊ ಅವನು) ಸದಾ ಕಾಲ ನರಕದಲ್ಲೇ ವಾಸಿಸಲಿರುವ ಮತ್ತು ಕರುಳು ಕತ್ತರಿಸಿ ಬಿಡುವಂತಹಾ ಕುದಿಯುವ ನೀರನ್ನು ಕುಡಿಸಲ್ಪಡಲಿರುವ ಜನರಿಗೆ ಸಮಾನವಾಗಬಲ್ಲನೇ?"**(47-15)

## ದೇವನ ಸಂದೇಶವಾಹಕರ ವ್ಯಕ್ತಿತ್ವ

ಎಲ್ಲಾ ಧರ್ಮಗಳೂ ಮರಣ ನಂತರದ ಜೀವನ, ಸ್ವರ್ಗ-ನರಕಗಳ ಕುರಿತು ಒಂದೇ ರೀತಿಯ ದೃಷ್ಟಿಕೋನವನ್ನು ಹೊಂದಿದೆ ಎನ್ನುವುದನ್ನು ನಾವು ಮನವರಿಕೆ ಮಾಡಿದೆವು. ದೇವನಿಂದ ಲಭಿಸಿದ ಸಂದೇಶದ ಆಧಾರದಲ್ಲೇ ನಾವು ಮರಣ ನಂತರ ಜೀವನವಿದೆ ಎಂದು ಹೇಳುತ್ತೇವೆಂದು ಸರ್ವ ಪ್ರವಾದಿಗಳೂ ಪ್ರತಿವಾದಿಸಿರುತ್ತಾರೆ.

ಮರಣಾ ನಂತರ ಒಂದು ಜೀವನ ವಿದೆಯೆಂದೂ ಅಲ್ಲಿ ಶಿಕ್ಷೆ ಅಥವಾ ರಕ್ಷೆ ಲಭಿಸುವುದೆನ್ನುವುದು ನಾವು ಸಂಶೋಧನೆ ನಡೆಸಿ ಕಂಡು ಹಿಡಿದ ಸತ್ಯವೆಂದು ಯಾವ ಪ್ರವಾದಿಗಳೂ ವಾದಿಸಲಿಲ್ಲ. ಆದ್ದರಿಂದ ಪ್ರವಾದಿಗಳು ಹೇಳಿದ ಮಾತು ಸತ್ಯವೊ-ಮಿಥ್ಯವೊ ಎಂದು ಕಂಡು ಹಿಡಿಯಲು ಭೌತಿಕವಾದ ಸಂಶೋಧನೆಗಳನ್ನು ಅವಲಂಭಿಸುವುದು ಸಾಧ್ಯವಿಲ್ಲ. ಹಾಗಾದರೆ ಅದು ಕಂಡು ಹಿಡಿಯಲಿರುವ ದಾರಿ ಯಾವುದು? ನಮಗೆ ದೈವಿಕ ಸಂದೇಶ ಅಥವಾ ಬೋಧನೆ ಲಭಿಸುತ್ತದೆಂದು ಪ್ರತಿಪಾದಿಸುವವರ ವ್ಯಕ್ತಿತ್ವವನ್ನು ಪರಿಶೋಧಿಸಿಕೊಂಡು ಅವರ ಮಾತಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳಬಹುದಾಗಿದೆ. ದೇವನ ದೂತರೆಂದು ವಾದಿಸುವವರು ಸುಳ್ಳು ಹೇಳುವವರೂ, ಸ್ವಾರ್ಥಿಗಳೂ, ಜನರನ್ನು ವಂಚಿಸುವವರೂ ಆಗಿದ್ದರೆ ಅವರು ಹೇಳುವ ಯಾವ ಮಾತನ್ನೂ ಗಣನೆಗೆ ತೆಗೆದುಕೊಳ್ಳದೆ ತಳ್ಳಿಹಾಕಬಹುದಾಗಿತ್ತು ಬದಲಾಗಿ ಅವರು ಸತ್ಯವನ್ನೇ ಹೇಳುವ ಸತ್ಯವನ್ನೇ ಅವಲಂಬಿಸಿಕೊಳ್ಳುವವರಾಗಿದ್ದರೆ ಅವರು ಹೇಳುವುದು ಸತ್ಯವೆಂದು ನಾವು ಸ್ವೀಕರಿಸಿಕೊಳ್ಳಬೇಕಾಗುತ್ತದೆ.

ಮರಣಾ ನಂತರದ ಜೀವನವು ಸತ್ಯವೆಂದೂ, ಅಲ್ಲಿ ಲಭಿಸುವ ಮುಕ್ತಿಯೇ ಯತಾರ್ಥವಾದ ಮುಕ್ತಿಯೆಂದು ಪ್ರಭೋಧನೆ ನಡೆಸಿದ ಪ್ರವಾದಿಗಳೆಲ್ಲರ ವ್ಯಕ್ತಿತ್ವವನ್ನು ಪರಿಶೋಧಿಸಿದಾಗಲೂ ನಮಗೆ ಮನವರಿಕೆಯಾಗುವ ಸಂಗತಿಯು ಅವರು ಸುಳ್ಳು ಹೇಳಲು ಸಾಧ್ಯವೆ ಇಲ್ಲ ಎನ್ನುವುದಾಗಿದೆ.

ಅವರು ಜೀವನವೆಲ್ಲಾ ಪೂರ್ತಿ ಸತ್ಯಸಂಧತೆ, ಸದ್ವಿಚಾರ, ಸತ್ಯನಿಷ್ಠೆ, ಪರಿಶುದ್ಧ ಪ್ರಕೃತಿ, ಉತ್ಕೃಷ್ಟವೂ-ಉನ್ನತವೂ ಆದ ಮನುಷ್ಯತ್ವವನ್ನು ಅಳವಡಿಸಿ ಜೀವಿಸಿದ ಆದರ್ಶ ಪುರುಷರಾಗಿದ್ದರು. ಪ್ರವಾದಿಗಳನ್ನು ವಿರೋಧಿಸುತ್ತಿದ್ದ, ಊರಿನಿಂದ ಹೊರದಬ್ಬಿದ, ಅವರನ್ನು ಹತ್ಯೆಗೈಯಲು ಷಡ್ಯಂತ್ರಗಳನ್ನು ರೂಪಿಸಿದವರು ಕೂಡಾ ಅವರ ಜೀವನ ಶೈಲಿಯನ್ನು -ಚಾರಿತ್ರ್ಯವನ್ನು ಅಂಗೀಕರಿಸಿದವರಾಗಿದ್ದರು. ಅವರ ಜೀವನದ ಯಾವುದೇ ರಂಗಗಳಲ್ಲಿ ಒಂದೇ ಒಂದು ನ್ಯೂನತೆಯನ್ನು ಕಂಡು ಹಿಡಿಯಲೂ ಅವರ ಸಮಕಾಲೀನರಾದ ಅವರ ಬದ್ಧ ವೈರಿಗಳಿಗೂ ಸಾಧಿಸಿಲ್ಲವೆನ್ನುವುದೇ ಅವರ ಪರಿಶುದ್ಧ ಜೀವನಕ್ಕೆ ಕನ್ನಡಿ ಹಿಡಿಯುತ್ತದೆ. ಸ್ವಯಂ ಕಷ್ಟನಷ್ಟಗಳನ್ನು ಸಹಿಸಿದ್ದು, ಕುಟುಂಬ-ಬಂಧುಗಳನ್ನು ತ್ಯಜಿಸಿದ್ದು, ಸ್ವಂತ ಊರಿನಿಂದ ಹೊರಕ್ಕಟ್ಟಲ್ಪಟ್ಟಿದ್ದು, ಜೀವವನ್ನೇ ಬಲಿಯರ್ಪಿಸಿದ್ದು ಎಲ್ಲವೂ ತನ್ನ ಸಮೂಹದ ಒಳಿತಿಗಾಗಿ ಆಗಿತ್ತು. ಶಾಶ್ವತ ವಿಜಯಕ್ಕಾಗಿ ಶ್ರಮಿಸಿದರು ಎನ್ನುವ ಕಾರಣಕ್ಕಾಗಿ ಮಾತ್ರವಾಗಿತ್ತು. ಲೌಕಿಕವಾದ ಯಾವುದೇ ಅಭಿಲಾಶೆಗಳನ್ನು ಇಟ್ಟುಕೊಳ್ಳದೆ ತನ್ನ ಸಮೂಹದ ಶ್ರೇಯಸ್ಸಿಗಾಗಿ ಪರಿಶ್ರಮಿಸಿದವರಾಗಿದ್ದರು ಅವರು. ಆಡಳಿತ, ಅಧಿಕಾರ, ಹೆಣ್ಣು, ಹೊನ್ನು, ಮಣ್ಣು ಎಂದು ಪರಿತಪಿಸದೆ, ಅವೆಲ್ಲವನ್ನೂ ತೃಣ ಸಮಾನವಾಗಿ ಪರಿಗಣಿಸಿಕೊಂಡು ಜೀವಿಸಿದವರನ್ನುಸ್ವಾರ್ಥಿಗಳೆಂದು ಯಾರಿಗಾದರೂ ಹೇಳಲು ಸಾಧ್ಯವೇ? ಇಲ್ಲ. ಖಂಡಿತ ಇಲ್ಲ. ಪ್ರವಾದಿಗಳ ಜೀವನವು ಇದಾಗಿತ್ತು. ಅವರು ವಂಚಕರಾಗಿರಲಿಲ್ಲ. ಅವರು ಯಾರನ್ನೂ ವಂಚಿಸಿದ್ದಾಗಿ ಚರಿತ್ರೆಯು ಕಲಿಸಿಕೊಡುವುದಿಲ್ಲ. ವಾಗ್ದಾನವನ್ನು ಪಾಲಿಸುವವರೂ, ಸತ್ಯಸಂಧರು, ಪರಿಶುದ್ಧ ಚಾರಿತ್ರ್ಯ ಹೊಂದಿದವರೂ ಆಗಿದ್ದರು ಪ್ರವಾದಿಗಳು. ಯಾವುದೇ ಸಂಕಷ್ಟದ ಪರಿಸ್ಥಿತಿಯಲ್ಲೂ ಸತ್ಯವೂ, ಶ್ರೇಷ್ಟವೂ, ಸಂಶಯಕ್ಕೆ ಆಸ್ಪದವಿಲ್ಲದ ಮಾರ್ಗವಾಗಿತ್ತು ಅವರು ಸ್ವೀಕರಿಸಿದ್ದು. ಸಮೂಹಕ್ಕೆ ಸಾರೋಪದೇಶವನ್ನು ನೀಡಿದ್ದು ಮಾತ್ರವಲ್ಲ. ಬೋಧನೆಯನ್ನು ಸ್ವಯಂ ತನ್ನ ಜೀವನದಲ್ಲಿ ಅಳವಡಿಸಿ ತೋರ್ಪಡಿಸಿ ಕೊಟ್ಟವರಾಗಿದ್ದರು ಅವರು.

ಈ ಸ್ವಭಾವ ವೈಶಿಷ್ಟ್ಯತೆಗಳೆಲ್ಲವೂ ಪ್ರವಾದಿಗಳು ಹೇಳಿದ ಮಾತು ಅಸತ್ಯವೆಂದು ಹೇಳಲು ಸಾಧ್ಯವಿಲ್ಲವೆಂಬುದಕ್ಕೆ ಸಾಕ್ಷ್ಯವಹಿಸುತ್ತದೆ. ಸ್ವಯಂ ಸುಳ್ಳೊ-ಕಳ್ಳತನವೊ, ವಂಚನೆಯೊ, ಸ್ವಾರ್ಥ ಸಾಧನೆಯೊ ಪ್ರವರ್ತಿಸದ ಒಬ್ಬನು ಸಮೂಹದಲ್ಲಿ ತ್ಯಾಗಗಳನ್ನು ಮಾಡುತ್ತಾ-ಕಷ್ಟಗಳನ್ನು ಸಹಿಸಿಕೊಂಡು ಒಂದು ಸುಳ್ಳನ್ನು ಪ್ರಚರಿಸಲು ಪರಿಶ್ರಮಿಸಿದನೆಂದರೆ ನಂಬಲಾದೀತೇ? ಆದ್ದರಿಂದ ಪ್ರವಾದಿಗಳು ದೈವೀಕವಾದ ಬೋಧನೆಯನ್ನು ಪಡೆದು ಅದಕ್ಕೆ ಅನುಸಾರವಾಗಿ ಮಾತ್ರ ಮಾತಾಡುವರೆಂಬ ವಾಸ್ತವಾಂಶದ ಹಿನ್ನೆಲೆಯಲ್ಲಿ ಅವರ ಬೋಧನೆಗಳನ್ನು ಸುಳ್ಳೆಂದು ಹೇಳಲು ಅವಕಾಶವಿರುವುದಿಲ್ಲ. ಮರಣಾನಂತರದ ಜೀವನದ ಕುರಿತು ಪ್ರವಾದಿಗಳ ಬೋಧನೆಯು ನೂರಕ್ಕೆ ನೂರು ಅಂಶವೂ ಸತ್ಯವೆನ್ನಲು ಕಾರಣ ಇದುವೇ ಆಗಿದೆ.

ಇದನ್ನು ಮೀರಿ ಅವರು ದೇವನ ಸಂದೇಶವಾಹಕರು ಎನ್ನುವುದಕ್ಕೆ ಸುರಿವ್ಯಕ್ತವಾದ ಪುರಾವೆಯು ಅವರು ಅವರ ಸಮಕಾಲೀನರಾದ ಜನರನ್ನು ಅಭಿಮುಖೀಕರಿಸಿದ ಶೈಲಿಯಾಗಿದೆ. ಪ್ರವಾದಿಗಳು ಅವರ ಸಮೂಹದ ಜನರ ಬುದ್ಧಿ-ವಿಜ್ಞಾನ-ವೈದ್ಯಕೀಯ ಮುಂತಾದ ಸಾಮರ್ಥಗಳ ಕುರಿತು ಬಹಿರಂಗ

ಸವಾಲುಗಳನ್ನು-ಪಂಥಾಹ್ವಾನಗಳನ್ನೂ ಒಡ್ಡುತ್ತಿದ್ದುದು ಅವರಿಂದ ವ್ಯಕ್ತಗೊಂಡ ಅಮಾನುಷಿಕವಾದ ದೃಷ್ಟಾಂತಗಳಾಗಿದ್ದವು. ಒಂದೊಂದು ಸಮೂಹಕ್ಕೆ ನಿಯುಕ್ತಿಗೊಳಿಸಲ್ಪಟ್ಟ ಸಂದೇಶವಾಹಕರಿಗೆ ಅದಕ್ಕೆ ಅನುಸಾರವಾದ ದೃಷ್ಟಾಂತಗಳನ್ನಾಗಿದೆ ನೀಡಲಾಗಿರುವುದು. ಈ ದೃಷ್ಟಾಂತಗಳ ಮುಂದೆ ಆಯಾ ಸಮೂಹದ ಬುದ್ಧಿ ಮತ್ತು ಸಾಮರ್ಥ್ಯಗಳು ಮಂಡಿ ಊರಿದವು. ಮೂಸಾ ಎಂಬ ಪ್ರವಾದಿಯಿಂದ ಬೆತ್ತ ನೆಲದಲ್ಲಿ ಎಸೆದರೆ ಹಾವಾಗಿ ಮಾರ್ಪಡುವ ದೃಷ್ಟಾಂತವನ್ನು ಪ್ರಕಟಿಸಲಾದಾಗ ಅಂದಿನ ಸರ್ವ ಜಾಲವಿದ್ಯೆಯ ಪ್ರವೀಣರು ಸೋಲೊಪ್ಪಿಕೊಂಡು ಶರಣಾಗತರಾಗಿ ಬಿಟ್ಟರು. ಯೇಸು ಎಂಬ ಪ್ರವಾದಿಯಿಂದ ಮರಣ ಹೊಂದಿದವರಿಗೆ ಪುನರ್ಜೀವ ನೀಡುವುದೂ ಸೇರಿದಂತೆ ಇನ್ನೂ ಕೆಲವು ದೃಷ್ಟಾಂತಗಳು ಪ್ರಕಟಗೊಂಡಾಗ ಅಂದಿನ ಸಕಲ ವೈದ್ಯಕೀಯ ಪ್ರೌಢಿಮೆ ಉಳ್ಳವರೂ ನಿರುತ್ತರರಾದರು. ಭಾರತೀಯ ಋಷಿ-ಮುನಿಗಳೂ ತಮಗೆ ದೇವ ಸಂದೇಶವು ಲಭಿಸುವುದೆನ್ನುವುದನ್ನು ಸಮರ್ಥಿಸಲು ಅಮಾನುಷಿಕ ಸಾಮರ್ಥ್ಯವನ್ನು ಪ್ರಕಟಿಸಿರಬೇಕು. ಆಯಾ ಸಮೂಹದ ಅಭಿರುಚಿ-ಪ್ರೌಢಿಮೆಯನ್ನು ಅನುಸರಿಸಿದ ದೃಷ್ಟಾಂತಗಳನ್ನಾಗಿದೆ ಆ ಸಮೂಹಕ್ಕೆ ನೆಲೆಗೊಂಡ ಪ್ರವಾದಿಯಿಂದ ಪ್ರಕಟಗೊಂಡಿರುವುದು. ಅವರು ದೇವನ ದೂತರೆಂದೂ ಅವರ ಉಪದೇಶಗಳು ದೇವ ಸಂದೇಶದಲ್ಲೇ ಅಧಿಷ್ಠಿತಗೊಂಡಿದ್ದೆಂದು ವ್ಯಕ್ತಗೊಳಿಸಲು ಪರ್ಯಾಪ್ತವಾದ ಪುರಾವೆಗಳಾಗಿದ್ದವು ಅವುಗಳು.

ಜಗತ್ತಿನಲ್ಲಿ ಎಲ್ಲೆಲ್ಲಾ ಮನುಷ್ಯರಿದ್ದಾರೊ ಅಲ್ಲೆಲ್ಲಾ ಸ್ವರ್ಗದ ಸುವಾರ್ತೆಯನ್ನೂ ನರಕದ ಕುರಿತು ಎಚ್ಚರಿಕೆಯನ್ನೂ ನೀಡುವ ಪ್ರವಾದಿಗಳು ಬಂದು ಹೋಗಿದ್ದಾರೆ. ಪ್ರವಾದಿಗಳು ನಿಯೋಗಿಸಲ್ಪಡದ ಒಂದೇ ಒಂದು ಸಮೂಹವು ಜಗತ್ತಿನಲ್ಲಿ ಗತಿಸಿ ಹೋಗಿಲ್ಲ. ಸೆಮಿಟಿಕ್ ವರ್ಗಗಳ ಮಧ್ಯೆಯೂ, ಆಫ್ರಿಕನರ ನಡುವೆಯೂ ಭಾರತೀಯರಲ್ಲೂ ದೇವ ಪ್ರವಾದಿಗಳೂ ಬಂದು ಮರಣಾನಂತರ ಜೀವನದ ಕುರಿತು ಕಲಿಸಿಕೊಟ್ಟಿರುತ್ತಾರೆ. ಕೇವಲ ಪರಲೋಕದ ಕುರಿತು ಅರಿವು ನೀಡುವುದಷ್ಟೇ ಅವರ ಕೆಲಸವಾಗಿರಲಿಲ್ಲ. ವಾಸ್ತವದಲ್ಲಿ ಅವರು ನರಕದಿಂದ ರಕ್ಷೆ ಪಡೆಯುವ-ಸ್ವರ್ಗದಲ್ಲಿ ಪ್ರವೇಶಿಸುವ ಜನರಲ್ಲಿ ಇರಬೇಕಾದ ಜೀವನ ಶೈಲಿಯನ್ನು ಪ್ರಾಯೋಗಿಕ ರೀತಿಯಲ್ಲಿ ಕಲಿಸಿಕೊಡುವುದೂ ಅವರ ಹೊಣೆಗಾರಿಕೆಯಾಗಿತ್ತು. ಅವರೆಲ್ಲರೂ ಸೈದ್ಧಾಂತಿಕವಾಗಿ ಒಂದೇ ತತ್ವವನ್ನು ಪ್ರತಿಪಾದಿಸಿದ್ದಾರೆ. ಜನರಲ್ಲಿ ಸತ್ಯಸಂಧತೆ-ಪ್ರಾಮಾಣಿಕತೆಯನ್ನು ಬೆಳೆಸಿ ಪರಲೋಕ ಶಿಕ್ಷೆಯಿಂದ ಅವರನ್ನು ಮುಕ್ತಿಗೊಳಿಸುವುದು ಮತ್ತು ಮೋಕ್ಷ ಸಂಪಾದನೆಗಾಗಿ ಅವರನ್ನು ಸನ್ನದ್ಧಗೊಳಿಸುವುದು ಅವರ ನಿಯುಕ್ತಿಯ ಹಿಂದಿನ ಉದ್ದೇಶವಾಗಿತ್ತು. ಅದಕ್ಕೆ ಅವಶ್ಯಕವಾದ ನಿಯಮ-ನಿರ್ದೇಶನಗಳನ್ನೂ, ಕರ್ಮಪಾಠಗಳನ್ನೂ ಅವರು ಕಲಿಸಿಕೊಟ್ಟಿದ್ದಾರೆ.

## ಅಂತ್ಯ ಪ್ರವಾದಿಯ ಕುರಿತು ಭವಿಷ್ಯ ವಾಣಿಗಳು :

ಸಮುದಾಯಗಳ ಮಧ್ಯೆ ಸಂಪರ್ಕಕ್ಕೆ ಯಾವುದೇ ರೀತಿಯ ಮಾಧ್ಯಮಗಳು ಇಲ್ಲದ ಕಾಲದಲ್ಲಿ ಒಂದೊಂದು ಸಮೂಹಗಳಿಗೆ ಒಂದೊಂದು ಪ್ರವಾದಿಗಳ ನಿಯುಕ್ತಿಯು ಅನಿವಾರ್ಯವಾಗಿತ್ತು. ಒಂದೇ ಕಾಲದಲ್ಲಿ ಜೀವಿಸಿದ ವ್ಯತ್ಯಸ್ಥ ಜನಾಂಗಗಳಿಗೆ ವ್ಯತ್ಯಸ್ಥ ಪ್ರವಾದಿಗಳಿದ್ದರು. ಲೋಕಕ್ಕೆಲ್ಲಾ ಸ್ವೀಕಾರ ಯೋಗ್ಯವಾದ ಸಂದೇಶಗಳೊಂದಿಗೆ ಒಂದು ಮಹಾ ಪ್ರವಾದಿಯು ಬರಲಿದ್ದಾರೆಂಬ ಸೂಚನೆಯನ್ನು

ಗತ ಪ್ರವಾದಿಗಳೆಲ್ಲರೂ ನೀಡುತ್ತಿದ್ದರು. ತಮ್ಮ ನಿಯುಕ್ತಿಯು ಒಂದು ಪ್ರತ್ಯೇಕ ಪ್ರದೇಶ ಅಥವಾ ಜನಾಂಗಕ್ಕೆ ಸೀಮಿತವಾಗಿದ್ದು, ಅಂತ್ಯ ಪ್ರವಾದಿಯ ಆಗಮನದೊಂದಿಗೆ ಲೋಕವು ಐಕ್ಯಗೊಂಡು ಒಂದೇ ಆಚಾರ ಮತ್ತುವಿಶ್ವಾಸ ಸ್ವೀಕರಿಸುವಂತಾಗುವುದು ಎಂದು ಗತ ಪ್ರವಾದಿಗಳು ಹೇಳಿರುವುದಾಗಿ ಕಂಡುಕೊಳ್ಳಬಹುದಾಗಿದೆ. ಬೈಬಲಿನ ಹಳೆಯ ಮತ್ತು ಹೊಸ ಒಡಂಬಡಿಕೆಗಳಲ್ಲೂ, ಹಿಂದೂ ಪುರಾಣಗಳಲ್ಲೂ ಮುಂದೆ ಬರಲಿರುವ ಓರ್ವ ಮಹಾ ಪ್ರವಾದಿಯ ಕುರಿತು ಪರಾಮರ್ಶೆಗಳನ್ನು ಕಾಣಬಹುದಾಗಿದೆ.

ಮುಂದೆ ಬರುವ ಪ್ರವಾದಿಯ ಕುರಿತು ವ್ಯಾಸ ಮುನಿ ಹೀಗೆ ಹೇಳಿದ್ದಾರೆ,

**'ಇತಸ್ಮನ್ಯಂತರೇ ಮ್ಲೇಚ ಆಚಾರಣ್ಯ ಸಮನ್ವಿದ**
**ಮಹಾಮದ ಇದಿಖ್ಯಾತ ಶಿಷ್ಯ ಶಾಖಾ ಸಮನ್ವಿತಂ!**

"ಅಂದು ಮಹಾಮದ್ ಎಂಬ ಹೆಸರಿನ ಓರ್ವ ವಿದೇಶಿ ಪ್ರಬೋಧಕನು ತನ್ನ ಶಿಷ್ಯರೊಂದಿಗೆ ಪ್ರತ್ಯಕ್ಷರಾಗುವರು"(ಭವಿಷ್ಯ ಪುರಾಣ 3-3-3-5)

ಈ ಲೋಕ ಪ್ರಬೋಧಕನ ಅನುಯಾಯಿಗಳ ಸ್ವಭಾವ-ಸವಿಶೇಷತೆಗಳ ಕುರಿತು ಮತ್ತು ಅವರ ಸಂಸ್ಕಾರ ಚಿಹ್ನೆಗಳ ಕುರಿತೂ ಭವಿಷ್ಯ ಪುರಾಣವು ಪ್ರವಚನ ನೀಡುತ್ತದೆ.

**ಲಿಂಗಚ್ಛೇದಿ ಶಿಖಾಹೀನಶ್ಮ ಶ್ರುಧಾರಿ ಸದೂಶಕ**
**ಉಚ್ಛಲಿಪೀ ಸರ್ವಭಕ್ಣಿ ಭವಿಷ್ಯತಿ ಜನಮೋಂ**
**ವಿನಕೌಶಲಂ ಚರ್ವವಸ್ತೋಷಾಂ ಭಕ್ಷ್ಯಯಾ ಮತಮಾಂ**
**ಮುಸಲೈನೈವ ಸಂಸ್ಕಾರ ಕುಶೈರಿ ಭವವಿಷ್ಯತಿ**
**ತಸ್ಮಾನ್ಮು ಸಲವಂತೋಹಿ ಜಾತಯೊ ಧರ್ಮ ಧೂಷಕ**
**ಇತಿ ಪೈಶಾಚಿಕ ಧರ್ಮಶ್ಚ ಭವಿಷ್ಯತಿ ಮಾಯಾಕ್ಮತ**

(ಭವಿಷ್ಯ ಪುರಾಣ 3:3:3:25-28)

"ಆತನ ಅನುಯಾಯಿಗಳು ಲಿಂಗಚ್ಛೇದನ ಕರ್ಮ (ಸುನ್ನತ್) ನಿರ್ವಹಿಸುವರು. ಅವರು ಮೀಸೆ ಬೆಳೆಸುವುದಿಲ್ಲ. ಗಡ್ಡ ಬೆಳೆಸುವರು. ಅವರು ಕ್ರಾಂತಿಕಾರಿಗಳಾಗುವರು. ಪ್ರಾರ್ಥನೆಗೆ ಬರಲು ಅವರು ಉಚ್ಚ ಸ್ವರದಿಂದ ಆಹ್ವಾನಿಸುವರು. ಹಂದಿಯ ವಿನಾ ಹೆಚ್ಚಿನ ಎಲ್ಲಾ ಪ್ರಾಣಿಗಳನ್ನು ಭಕ್ಷಿಸುವರು. ಅವರು ಧರ್ಮವನ್ನು ಮಲಿನಗೊಳಿಸುವವರ ವಿರುದ್ಧ ಹೋರಾಡುವುದರಿಂದ ಅವರು ಮುಸ್ಲಿಮ್ ಅಥವಾ ಮುಸಲೆ ಎಂಬ ಹೆಸರಿನಿಂದ ಖ್ಯಾತರಾಗುವರು. ಈ ಮಾಂಸಹಾರಿಗಳ ಧರ್ಮವು ನನ್ನಿಂದ ಆರಂಭವಾಗುವುದು"

ಪ್ರವಾದಿ ಮೂಸಾ(ಮೋಶೆಸ್) ಅಂತ್ಯ ಪ್ರವಾದಿಯ ಬಗ್ಗೆ ಹೇಳಿರುವ ಮಾತುಗಳು ಬೈಬಲಿನ ಹಳೆಯ ಒಡಂಬಡಿಕೆಯಲ್ಲಿರುವುದನ್ನು ಈ ರೀತಿ ಕಾಣಬಹುದಾಗಿದೆ. **"ನಿನ್ನಂತಹಾ ಒಂದು ಪ್ರವಾದಿಯನ್ನು ಅವರ ಸಹೋದರರಲ್ಲಿ ನಾನು ಅವರಿಗಾಗಿ ನಿಯುಕ್ತಿಗೊಳಿಸುವೆನು. ನಾನು ನನ್ನ**

**ವಚನಗಳನ್ನು ಅವರ ನಾಲಿಗೆಯ ಮೂಲಕ ಸ್ಥಿರಪಡಿಸುವೆನು. ನಾನು ಕಲ್ಪಿಸುವುದನ್ನೆಲ್ಲಾ ಅವರು ಅವರ ಸಮುದಾಯಕ್ಕೆ ಹೇಳಿ ಕೊಡುವರು. ಅವರು ನನ್ನ ಹೆಸರಿನಿಂದ ಉಚ್ಛರಿಸುವ ನನ್ನ ವಚನಗಳನ್ನು ಸ್ವೀಕರಿಸಿಕೊಳ್ಳದವರ ಲೆಕ್ಕಾಚಾರಗಳನ್ನು ನಾನೇ ಮಾಡುವೆನು''.** (ಆವರ್ತನೆ 18:18-19)

ಏಸುಕ್ರಿಸ್ತರು ಕೂಡಾ ಬರಲಿರುವ ಪ್ರಭೋಧಕನ ಕುರಿತು ಈ ರೀತಿ ಭವಿಷ್ಯ ಹೇಳಿದ್ದರು. **''ನಾನು ಮರಳಿ ಹೋಗುವುದು ನಿಮ್ಮ ಶ್ರೇಯಸ್ಸಿಗೇ ಆಗಿದೆ. ನಾನು ಮರಳದಿದ್ದರೆ ಸಹಾಯಕನು ನಿಮ್ಮ ಬಳಿ ಬರಲಾರರು. ನಾನು ಮರಳಿದರೆ ಅವರನ್ನು ನಾನು ನಿಮ್ಮ ಬಳಿ ಕಳುಹಿಸುತ್ತೇನೆ. ಅವರು ಬರುವಾಗ ಪಾಪದ ಕುರಿತು ಪುಣ್ಯಗಳ ಕುರಿತು, ನ್ಯಾಯ-ನೀತಿಯ ಬಗ್ಗೆ ಲೋಕಕ್ಕೆ ವಿವರ ನೀಡುವರು''**

(ಯೋಹಾನಾ 16:7, 8)

"ಇನ್ನೂ ಕೆಲವು ವಿಷಯಗಳನ್ನು ನನಗೆ ನಿಮ್ಮೊಂದಿಗೆ ಹೇಳಲಿದೆ. ಅಂದರೆ, ಈಗ ನಿಮಗದು ಸ್ವೀಕರಿಸಲು ಸಾಧ್ಯವಿಲ್ಲ. ಸತ್ಯದ ಆತ್ಮವು ಬಂದು ಅವನು ನಿಮ್ಮೆಲ್ಲರನ್ನೂ ಸ್ತುತ್ಯರ್ಹ ಮಾರ್ಗಕ್ಕೆ ಕರೆಯುವನು. ಅವನು ಸ್ವಯಂ ಏನನ್ನೂ ಹೇಳಲಾರನು. ಅಂದರೆ ಅವನು ಆಲಿಸುವುದನ್ನೇ ಹೇಳುವನು. ಬರಲಿರುವ ಕಾರ್ಯಗಳನ್ನು ಅವನು ನಿಮ್ಮೊಂದಿಗೆ ಪ್ರಖ್ಯಾಪಿಸುವನು''.

(ಯೊಹನ್ನಾ 16:12, 13)

ಅಂಧಕಾರದಿಂದ ಲೋಕವನ್ನು ವಿಮೋಚನೆ ಮಾಡುವ ಸೂರ್ಯನಂತಹಾ ಶಾಂತ ಮತ್ತು ಸುಂದರವಾದ ಒಂದು ಲೋಕದ ಉದಯದೊಂದಿಗೆ ಪ್ರತ್ಯಕ್ಷವಾಗಲಿರುವ ಓರ್ವ ಮೇಧಾವಿಯನ್ನು ಎದುರು ನೋಡುತ್ತಿತ್ತು ಭಾರತೀಯ ಸಮಾಜ. ಭವಿಷ್ಯ ಪುರಾಣದಲ್ಲಿ ಅಂತಿಮವಾಗಿ ಬರಲಿರುವ ಮೇಧಾವಿಯನ್ನು "ಮಹಾಮದ್' ಎಂದು ಕರೆದಿದ್ದರೆ ವಿಷ್ಣು ಪುರಾಣದ ಭಾಗ 4 ಅಧ್ಯಾಯ 24ರಲ್ಲಿ ಅವರನ್ನು ಕಲ್ಕಿ ಅವತಾರವೆಂದು ಪರಿಚಯಿಸಲಾಗಿದೆ. ಅಥರ್ವ ವೇದ (20:127) ದಲ್ಲಿನ ವಚನದಲ್ಲಿ 'ಪ್ರಶಂಸಿಸಲ್ಪಡುವವನು' ಎಂದಾಗಿದೆ ಅವರ ಕುರಿತು ಉಲ್ಲೇಖಿಸಲ್ಪಟ್ಟಿರುವುದು. ಕಲಿಯುಗದಲ್ಲಿ ಒಂದು ಮರಳುಭೂಮಿಯಲ್ಲಿ ದೇವದಾಸನ ಮತ್ತು ಸುಮತಿಯ ಪುತ್ರನಾಗಿ ಜನಿಸಿ ಸಮಸ್ತ ಲೋಕಕ್ಕೆ ಬೆಳಕು ಹರಡುವವನಾಗಿದ್ದಾನೆ ಕಲ್ಕಿ. ಒಂಟೆಗಳ ಲೋಕದಿಂದ ಲೋಕದ ವಿಮೋಚಕನಾಗಿ ಪ್ರತ್ಯಕ್ಷಪಡುವವನೇ ಅಥರ್ವವೇದದ 'ಪ್ರಶಂಸಿಸಲ್ಪಡುವವನು' ಸರ್ವಲೋಕಗಳೂ ಸ್ವೀಕರಿಸಲ್ಪಡಬಲ್ಲ ಸಂದೇಶಗಳೊಂದಿಗೆ ರಂಗ ಪ್ರವೇಶಿಸುವ ಒಂದು ಮಹಾಪುರುಷನ ಕುರಿತು ಸಕಲ ಭಾರತೀಯ ದಾರ್ಶನಿಕ ಗ್ರಂಥಗಳಲ್ಲೂ ಉಲ್ಲೇಖವಿರುವುದನ್ನು ಕಾಣಬಹುದಾಗಿದೆ.

ಮೋಸೆಸ್‌ನ ಅನುಯಾಯಿಗಳಾದ ಇಸ್ರಾಯೀಲರು ಕೂಡಾ ಅವರ ಗ್ರಂಥದಲ್ಲಿ ಉಲ್ಲೇಖಿತವಿರುವ ಮೂಸಾರಂತಹ ಓರ್ವ ಪ್ರವಾದಿಯನ್ನು ಪ್ರತೀಕ್ಷಿಸಿಕೊಂಡಿದ್ದರು. ಇಸ್ರಾಯೀಲ್ ಸಹೋದರರಿಂದಲೇ ನಿಯುಕ್ತಿಗೊಳಿಸಲ್ಪಡುವ ಓರ್ವ ಮಹಾಪ್ರವಾದಿಯನ್ನಾಗಿತ್ತು ಅವರು ನಿರೀಕ್ಷಿಸುತ್ತಿದ್ದುದು. ಆ ಪ್ರವಾದಿಯ ಆಗಮನದ ಕುರಿತು ಇನ್ನೂ ಹಲವು ಸುಧಾಕರಕರು ಭವಿಷ್ಯ ನುಡಿದಿರುವುದನ್ನು ಕಾಣಬಹುದಾಗಿದೆ. ಯೆರೆಮೀಯ ಪ್ರವಾದಿ ಹೇಳಿದ್ದು ಹೀಗೆ, **''ಶಾಂತಿಯನ್ನು ಉಪದೇಶಿಸುವ**

**ಪ್ರವಾದಿಯ ಕಾಲಘಟ್ಟದಲ್ಲಿ ಅವರ ವಚನಗಳು ಸತ್ಯವಾಗಿ ಸಾಕ್ಷಾತ್ಕರಿಸುವಾಗ ಅವರನ್ನು ಸೃಷ್ಟಿಕರ್ತನೇ ಕಳುಹಿಸಿದ್ದಾನೆನ್ನುವುದು ರುಜುವಾಗುತ್ತದೆ.''** (28/9)

ಮೂಸಾರ ನಂತರಬಂದ ಪ್ರವಾದಿಗಳ ವ್ಯಕ್ತಿತ್ವ ಮತ್ತು ಕಾರ್ಯಶೈಲಿಯನ್ನು ಇಸ್ರಾಯೀಲರು ಪರಿಶೋಧಿಸಿದರು. ಅವರು ಯಾರೂ 'ಮೂಸಾರಂತಹ ಪ್ರವಾದಿ' ಎಂಬ ವಿಶೇಷನಕ್ಕೆ ಅರ್ಹರಲ್ಲವೆಂದು ಅವರು ಮನವರಿಕೆ ಮಾಡಿಕೊಂಡರು. ಮೂಸಾರಿಂದ ಏಸುವರೆಗಿನ ಪ್ರವಾದಿಗಳೆಲ್ಲರೂ ಇಸ್ರಾಈಲರಿಂದಲೇ ಬಂದವರಾಗಿದ್ದರು.ಇಸ್ರಾಈಲರ ಸಹೋದರರಿಂದಲ್ಲ. ಅವರು ಯಾರಿಗೂ ಮೂಸಾರಂತಹ ನಿಯಮಗಳನ್ನು ನೀಡಲಾಗಿರಲಿಲ್ಲ. ಶಾಂತಿಯನ್ನು ಬೋಧಿಸುವ ಪ್ರವಾದಿ ಶಂಖಲೆಯನ್ನು ಯಹೂದಿಗಳಿಂದ ಬೇರ್ಪಡಿಸುವ ಆ ಪ್ರವಾದಿಯ ಆಗಮನವನ್ನು ಅವರು ಪ್ರತೀಕ್ಷಿಸುತ್ತಿದ್ದರು. ಈಸ್ರಾಯಿಲರೆಡೆಗೆ ಕಳುಹಿಸಲ್ಪಡುವ ಅಂತಿಮ ಪ್ರವಾದಿಯಾದ ಏಸು ಮತ್ತು ಸರ್ವಲೋಕದ ಸಮಸ್ತ ಮಾನವ ಕುಲಕ್ಕಾಗಿ ಕಳುಹಿಸಲ್ಪಡುವ ಪ್ರವಾದಿಯ ಕುರಿತು ಯಹೂದಿಯರಿಗೆ ಮೊದಲೇ ಮುನ್ಸೂಚನೆ ನೀಡಲಾಗಿತ್ತು. ಅವರೆಡೆಗೆ ಬಂದ ಪ್ರತೀ ಪ್ರವಾದಿಗಳಲ್ಲೂ ಅವರು `ನೀವು ಕ್ರಿಸ್ತುವೇ? ಆ ಪ್ರವಾದಿಯೇ' ಎಂದು ಕೇಳುತ್ತಿದ್ದರು. ಈ ಸಂಗತಿಯು ಏಸುವಿನಿಂದ ಮೊದಲು ಬಂದ ಯೊಹಾನಾರೊಂದಿಗೆ ಯಹೂದಿ ಪುರೋಹಿತರು ನಡೆಸಿದ ಸಂಭಾಷಣೆಯಲ್ಲಿ ಸುಸ್ಪಷ್ಟವಾಗಿ ಮನವರಿಕೆಯಾಗುತ್ತದೆ. ಅವರು ಕೇಳಿದರು, "ನೀವು ಕ್ರಿಸ್ತುವಾಗಿದ್ದೀರಾ? 'ನಾನು ಕ್ರಿಸ್ತುವಲ್ಲ' ಎಂದಾಗಿತ್ತು ಅವರು ನೀಡಿದ ಉತ್ತರ. ಬಳಿಕ ಅವರ ಪ್ರಶ್ನೆ 'ಹಾಗಾದರೆ ನೀವು ಯಾರು? ಎಲಿಯಾರೇ? `ಅವರು ಹೇಳಿದರು, 'ಅಲ್ಲ' ಅವರು ಮತ್ತೆ ವಿಚಾರಿಸಿದರು? ನೀವು ಆ ಪ್ರವಾದಿಯಾಗಿದ್ದೀರೊ?' ಅವರು ಉತ್ತರಿಸಿದರು 'ಅಲ್ಲ'(ಯೋಹನ್ನಾನ್ 1:20-23) ಏಸುವಿನ ನಂತರ ಯಹೂದರು ಅ ಪ್ರವಾದಿಯನ್ನು ಕಾಯುತ್ತಿದ್ದರು.

ಇಸ್ರಾಈಲರಲ್ಲಿ ಅಂತಿಮ ಪ್ರವಾದಿಯಾಗಿ ಏಸು ಜಗತ್ತಿಗೆ ಕಾಲಿಟ್ಟರು. ಅವರು ಇಸ್ರಾಈಲ್ ಜನಾಂಗಕ್ಕಷ್ಟೇ ಕಳುಹಿಸಲ್ಪಟ್ಟ ಪ್ರವಾದಿಯಾಗಿದ್ದರು. 'ಇಸ್ರಾಈಲ್ ಭವನದ ಕಳೆದು ಹೋದ ಕಡೆಗೆ ಮಾತ್ರ ನನ್ನನ್ನು ಕಳುಹಿಸಲಾಗಿದೆ' (ಮುತ್ತಾಯ 15:24) ಎಂಬ ಏಸುವಿನ ವಚನದಿಂದ ಅವರ ದೌತ್ಯವು ಯಹೂದಿಯರಿಗೆ ಮಾತ್ರ ಸೀಮಿತವಾಗಿತ್ತೆಂದು ವ್ಯಕ್ತವಾಗುತ್ತದೆ. ಅವರು ಕೂಡಾ ಮೂಸಾರಂತಹಾ ಪ್ರವಾದಿಯಾಗಿರಲಿಲ್ಲ. ಮೋಸೆಸ್‌ರ ಜನನವು ಸಾಮಾನ್ಯ ರೀತಿಯಲ್ಲಾಗಿದ್ದರೆ (ಮಾತಾ-ಪಿತರ-ಸಂಗಮದಿಂದ) ಏಸು ತಂದೆ ಇಲ್ಲದ ಅಸಾಧಾರಣ ರೀತಿಯಲ್ಲಾಗಿದೆ ಜನಿಸಿದ್ದು. ಮೊಸೆಸ್‌ರಿಗೆ ಹೆಂಡತಿ ಮಕ್ಕಳಿದ್ದರು ಆದರೆ ಏಸುವಿಗೆ ಅದೊಂದೂ ಇರಲಿಲ್ಲ. ಮೋಸೆಸ್ ಆಡಳಿತಗಾರರಾಗಿದ್ದರೆ, ಏಸು ಕೇವಲ ಪ್ರವಾದಿಯಷ್ಟೇ ಆಗಿದ್ದರು. ಮೋಸೆಸ್‌ರಿಗೆ ನ್ಯಾಯ ಪ್ರಮಾಣವನ್ನು ನೀಡಲಾಗಿತ್ತು. ಏಸುವಾದರೊ ಮೊಸೆಸ್‌ರ ಪ್ರಮಾಣಗಳನ್ನು ಅಂಗೀಕರಿಸುವುದಷ್ಟೇ ಮಾಡಿದರು. ಮಾತ್ರವಲ್ಲ ಯೇಸು ಇಸ್ರಾಯೀಲ್‌ರಿಂದ ಬಂದ ಪ್ರವಾದಿಯಾಗಿದ್ದರು, ಇಸ್ರಾಈಲರ ಸಹೋದರರಿಂದಲ್ಲ. ಆದ್ದರಿಂದ ಪೂರ್ವಿಕ ವೇದ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟ ಮೊಸೆಸ್‌ರಂತಹಾ ಪ್ರವಾದಿ ಏಸುವಾಗಿರಲಿಲ್ಲ.

ಬರಲಿರುವ ಪ್ರವಾದಿಯ ಕುರಿತು ಕ್ರಿಸ್ತ ಹೇಳಿದ ವಿಷಯಗಳನ್ನು ಈ ಮೊದಲೇ ತಿಳಿಸಲಾಗಿದೆಯಲ್ಲವೇ? 'ನಾನು ಮರಳದಿದ್ದರೆ ಸಹಾಯಕನು ನಿಮ್ಮ ಬಳಿಗೆ ಬರಲಾರರು ಎಂದಾಗಿದೆ ಅಂದು ಏಸು ನುಡಿದಿರುವುದು. ಇಲ್ಲಿ ಸಹಾಯಕನು ಎಂದು ಅನುವಾದಿಸಿರುವುದು. ಪಾರಕ್ಲೀಟನ್ (Paracletos) ಎಂಬ ಪದವನ್ನಾಗಿದೆ. ಈ ಪದದೊಂದಿಗೆ ಶಬ್ದ ಸಾದೃಶ್ಯವಿರುವ ಒಂದು ಪದವಾಗಿದೆ 'ಪೆರಿಕ್ಲೆಟೋಸ್'(Periclytos) ಏಸು ಮಾತನಾಡಿದ್ದು ಗ್ರೀಕ್ ಭಾಷೆಯಲ್ಲಿ ಅಲ್ಲ ತಾನೇ? ಏಸುವಿನ ವಚನಗಳನ್ನು ಸಂಗ್ರಹಿಸಲ್ಪಟ್ಟಿದು ಅವರು ಮರಣ ಹೊಂದಿದ ಹಲವು ಕಾಲದ ನಂತರವೇ ಆಗಿತ್ತು. ಅದರಿಂದಾಗಿ 'ಪೆರಿಕ್ಲೆಟೋಸ್' ಎಂಬ ಪದಕ್ಕೊ, 'ಪೆಲಿಕ್ಲಿಟೋಸ್' ಎಂಬ ಪದಕ್ಕೊ ಸಮಾನವಾದ ಪದವನ್ನು ಏಸು ಉಪಯೋಗಿಸಿದ್ದೆಂದು ಅನ್ವೇಷಿಸಲು ನಮಗೆ ಸಾಧ್ಯವಲ್ಲ. 'ಸಹಾಯಕ' 'ಸುವಾರ್ತೆ ನೀಡುವವ' 'ಎಚ್ಚರಿಕೆ ಕೊಡುವವನು' ಮುಂದಾದ ಪದಗಳಿಂದ ಅನುವಾದಿಸಲ್ಪಡುವ 'ಪಾರಕ್ಲೀಟಸ್'ನ್ನೂ 'ಪ್ರಶಂಸಿಸಲ್ಪಡುವವನು' ಎಂದು ಅರ್ಥ ಬರುವ ಪೆರಿಕ್ಲಿಟೋಸ್ ಎಂಬ ಪದವನ್ನೋ ಆಗಿರಬೇಕು ಏಸು ತನ್ನ ನಂತರ ಬರುವ ಪ್ರವಾದಿಯ ಕುರಿತು ಹೇಳುವಾಗ ಉಪಯೋಗಿಸಿದ್ದುದು.

ಅದು ಏನಾಗಿದ್ದರೂ ಬರಲಿರುವ ಓರ್ವ ಮಹಾನ್ ಪ್ರವಾದಿಯ ಕುರಿತಾಗಿದೆ ಏಸು ಭವಿಷ್ಯ ನುಡಿದಿರುವುದೆನ್ನುವುದರಲ್ಲಿ ಸಂಶಯವಿಲ್ಲ. "ನಾನು ಮರಳಿ ಹೋಗದಿದ್ದರೆ ಸಹಾಯಕನು ನಿಮ್ಮ ಬಳಿಗೆ ಬರಲಾರರು, ನಾನು ಹೋಗಿ ಅವರನ್ನು ನಿಮ್ಮ ಬಳಿಗೆ ಕಳುಹಿಸುವೆನು" ಎಂಬ ಏಸುವಿನ ವಚನದಲ್ಲಿ ಏಸುಕ್ರಿಸ್ತರ ನಂತರ ಬರಲಿರುವ ಓರ್ವ ವ್ಯಕ್ತಿಯ ಕುರಿತಾಗಿದೆ ಅವರು ಪ್ರತಿಪಾದಿಸಿರುವುದೆನ್ನುವುದು ವ್ಯಕ್ತವಾಗುತ್ತದೆ. ಕೆಲವೊಮ್ಮೆ ಈ ಪ್ರಸ್ತಾಪಗಳು `ಪರಿಶುದ್ಧ ಆತ್ಮ'ದ ಕುರಿತಾಗಿದೆ ಎಂದು ವಾದಿಸಲಾಗುತ್ತದೆ. ಈ ವಾದ ಅಥವಾ ವ್ಯಾಖ್ಯಾನ ಸರಿಯಲ್ಲ `ಪರಿಶುದ್ಧ ಆತ್ಮ'ವು ಏಸು ಕ್ರಿಸ್ತರಿಗಿಂತ ಮೊದಲು ಅವರ ಜೀವಿತ ಕಾಲದಲ್ಲೂ ಇದ್ದವರೆಂದು ಬೈಬಲ್‌ನಿಂದಲೇ ವ್ಯಕ್ತವಾಗುತ್ತದೆ. 'ಸ್ನಾನಿಕ ಯುಹೋನನೊಂದಿಗೂ (ಲೋಕೋಸ್ 1/15) 'ಎಲಿಝಬೆತ್ತಿನೊಂದಿಗೂ'(ಲೂಕೇಸ್ 1/41) ಸಕಯಿಯಾವಿನೊಂದಿಗೂ (ಲೂಕೇಸ್ 1/67) ಶಿಮಯಾನೊಂದಿಗೂ (ಲೂಕೇಸ್ 2/26) ಇವರೆಲ್ಲರೊಂದಿಗೂ ಪರಿಶುದ್ಧಾತ್ಮವು ಇತ್ತೆಂದೂ, ಮಾತ್ರವಲ್ಲದೆ ಏಸು ಸ್ನಾನ ಮಾಡುತ್ತಿರಲು ಅವರ ಹತ್ತಿರ ಪರಿಶುದ್ಧಾತ್ಮವು ಪಾರಿವಾಳದ ರೂಪದಲ್ಲಿ ಇಳಿದು ಬಂದಿತ್ತೆಂದು(ಲೂಕೋಸ್ 3/22) ಸುವಿಶೇಷಗಳಲ್ಲಿ ನಾವು ಕಾಣಬಹುದಾಗಿದೆ. ಇದರಿಂದ ಏಸು ಹೇಳಿದ ಸತ್ಯದ ಸಂದೇಶವಾಹಕ ಪರಿಶುದ್ಧಾತ್ಮವಾಗಿರಲು ಸಾಧ್ಯವೇ ಇಲ್ಲ. ಸಕಲ ಜನರನ್ನು ಸತ್ಯದ ಹಾದಿಯಲ್ಲಿ ಮುನ್ನಡೆಸಲು, ಒಳಿತು-ಕೆಡುಕು, ನ್ಯಾಯ-ಅನ್ಯಾಯಗಳು ಕುರಿತು ಬೇರ್ಪಡಿಸಿ ತಿಳಿಸಲು, ಪರಲೋಕದ ಅಗೋಚರ ಸಂಗತಿಗಳ ಕುರಿತು ಎಚ್ಚರಿಸಲು ಸತ್ಯ ಸಂದೇಶ ವಾಹಕನಾದ ಸಹಾಯಕನು ಅಥವಾ ಸ್ತುತಿಸಲ್ಪಡವವನ ಕುರಿತಾಗಿದೆ. ಏಸು ಕ್ರಿಸ್ತರು ಭವಿಷ್ಯ ಹೇಳಿರುವುದೆನ್ನುವುದು ಸುವ್ಯಕ್ತವಾಗಿದೆ. ಆ ಒಂದು ಮಹಾ ನಾಯಕನ ಆಗಮನಕ್ಕಾಗಿ ಏಸುವಿನ ಅನುಯಾಯಿಗಳು ಕಾಯುತ್ತಿದ್ದರು.

## ಅಂತಿಮ ದೇವದೂತ :

ಮಾನವ ರಾಶಿಯು ನಿರೀಕ್ಷಿಸುತ್ತಿದ್ದ ಅಂತಿಮ ದೇವದೂತನನ್ನು ಮಡಿಲೇರಿಸಿಕೊಳ್ಳುವ ಮಹಾಭಾಗ್ಯವು ಲಭಿಸಿದ್ದು ಅರೇಬಿಯಕ್ಕಾಗಿದೆ. ಕ್ರಿಸ್ತ ಶಕ 571, ಎಪ್ರಿಲ್ 20ರಂದು ಅಬ್ದುಲ್ಲ ಮತ್ತು ಆಮಿನಾ ಎಂಬ ದಂಪತಿಗಳ ಸುಪುತ್ರನಾಗಿ ಮುಹಮ್ಮದ್(ಸ)ರವರು ಜನಿಸಿದರು. ಆಮಿನ ಎಂಬ ಅರಬಿ ಹೆಸರಿನ ಶಬ್ದಾರ್ಥವು ವಿಶ್ವಸ್ಥೆಯೆಂದೂ, ಅಬ್ದುಲ್ಲ ಎಂಬ ಅರಬಿ ಪದದ ಅರ್ಥವು ದೇವದಾಸನೆಂದೂ ಆಗುತ್ತದೆಂಬ ಅಂಶವು ಪ್ರತ್ಯೇಕವಾಗಿ ಪರಿಗಣಿಸಬೇಕಾಗಿದೆ. ದೇವದಾಸ (ವಿಷ್ಣುಂ ಭಗತಃ)ನ ಮತ್ತು ವಿಶ್ವಸ್ಥೆಯ (ಸುಮತಿ) ಮಗನಾಗಿ ಕಲ್ಕಿಯು ಮರಳು ಭೂಮಿಯಲ್ಲಿ ಅವತರಿಸುತ್ತಾರೆಂಬ ವಿಷ್ಣು ಪುರಾಣದ ಪ್ರಸ್ತಾಪವು ಮುಹಮ್ಮದ್(ಸ)ರವರ ಜನನದ ಮಟ್ಟಿಗೆ ಶೇಕಡಾನೂರರಷ್ಟು ಹೋಲುತ್ತದೆ ಎಂದರೆ ಅತಿಶಯೋಕ್ತಿ ಆಗಲಾರದು. ವ್ಯಾಸ ಮುನಿಯ 'ಮಹಾಮದ ಇತಿಖ್ಯಾತ'(ಮುಹಮ್ಮದ್ ಎಂದು ಕರೆಯಲ್ಪಡುವ) ಎಂಬ ಪ್ರಸ್ತಾಪವು ಅಂತ್ಯ ಪ್ರವಾದಿಯ ಹೆಸರನ್ನು ಕೂಡಾ ಸುಸ್ಪಷ್ಟವಾಗಿ ಉಲ್ಲೇಖಿಸುತ್ತಿದೆ. 'ಪ್ರಶಂಶಿಸಲ್ಪಡುವವರು' 'ಸ್ತುತಿಸಲ್ಪಡುವವರು' ಎಂಬಂತೆ ಮುಹಮ್ಮದ್(ಸ)ರವರ ಕುರಿತಾಗಿ ಅಥರ್ವ ವೇದದ ಸೂಕ್ತಗಳಲ್ಲಿ ಪ್ರಸ್ತಾಪಗಳಿವೆ.

ಇಲ್ಲಿ ಪ್ರಸ್ತಾಪಗೊಂಡಿರುವ `ಪ್ರಶಂಶಿಸಲ್ಪಡುವವನು' ಎಂಬ ಪದವನ್ನು ಏಸುವಿನ ಪೆರಿಕ್ಲಿಟೋಸ್ (ಸ್ತುತಿಸಲ್ಪಡುವವನು)ನ ಕುರಿತು ಪ್ರವಚನಗಳು ಕೂಡಾ ಪ್ರವಾದಿ ಮುಹಮ್ಮದ್(ಸ)ರವರ ಕುರಿತಾಗಿತ್ತೆಂದು ಸುಸ್ಪಷ್ಟವಾಗಿ ಮನವರಿಕೆಯಾಗುತ್ತದೆ. ಮೂಸ(ಅ)ರವರಂತಿರುವ ಪ್ರವಾದಿಯ ಆಗಮನವು ಇಸ್ರಾಯೀಲರ ಸಹೋದರರೊಳಗಿಂದುಂಟಾಗುವುದೆಂಬ ಆವರ್ತನ ಗ್ರಂಥದ ಪ್ರವಚನವು ಕೂಡಾ ಮುಹಮ್ಮದ್(ಸ)ರನ್ನೇ ದೃಢೀಕರಿಸುತ್ತದೆ. ಅಬ್ರಾಹಾಮರ ದ್ವಿತೀಯ ಪುತ್ರನಾದ ಇಸ್ಹಾಖರ ವಂಶ ಪಾರಂಪರ್ಯದವರನ್ನು ಇಸ್ರಾಯೀಲರೆನ್ನುತ್ತಾರೆ. ಪ್ರಥಮ ಪುತ್ರ ಇಸ್ಮಾಯಿಲ್(ಅ)ರವರ ವಂಶ ಪಾರಂಪರ್ಯದಲ್ಲಿ ಬಂದವರಾಗಿದ್ದಾರೆ ಅರಬಿಗಳು. ಅರಬಿಗಳಲ್ಲಿ ಅಥವಾ ಇಸ್ರಾಯಿಲರ ಸಹೋದರರಾದ ಇಸ್ಮಾಯೀಲರ ವಂಶದಲ್ಲಿ ಜನಿಸಿದ ಮೂಸ(ಅ)ರವರಂತಹಾ ಪ್ರವಾದಿ ಮುಹಮ್ಮದ್(ಸ) ಅಲ್ಲದೆ ಮತ್ತಾರು? ಜೀವನ-ದೌತ್ಯ-ಜನಾಂಗ ಈ ಎಲ್ಲಾ ದೃಷ್ಟಿಕೋನದಲ್ಲೂ ಮೂಸರನ್ನು ಹೋಲುವವರು ಮುಹಮ್ಮದ್(ಸ)ರವರಾಗಿದ್ದಾರೆ. ಹೊಸ ಜೀವನ ಸಂಹಿಕೆ ನೀಡಲಾದ, ರಾಜ್ಯಾಧಿಕಾರವನ್ನು ವಹಿಸಿಕೊಡಲಾದ ಮುಹಮ್ಮದ್(ಸ)ರವರ ಜನನವು-ಮರಣವು-ಜೀವನವೆಲ್ಲವೂ ಮೂಸ(ಅ)ರಂತೆ ಸರಳ-ಸಾಧಾರಣವಾದ ರೀತಿಯಲ್ಲಿತ್ತು. ಅವರ ಆಗಮನದೊಂದಿಗೆ ಪ್ರವಾದಿಗಳ ಶೃಂಖಲೆಯನ್ನು ಇಸ್ರಾಯೀಲರಿಂದ ಬೇರ್ಪಡಿಸಲಾಯಿತು.

ಮುಹಮ್ಮದ್(ಸ) ಈ ಲೋಕದಲ್ಲಿ ಜನಿಸಲಿರುವ ಕಟ್ಟ-ಕಡೆಯ ಮನುಷ್ಯನ ತನಕ ಸರ್ವ ಮನುಷ್ಯರಿಗಾಗಿ ನಿಯುಕ್ತಿಗೊಳಿಸಲಾದ ಸಂದೇಶವಾಹಕರಾಗಿದ್ದಾರೆ. ಅವರ ರಹಸ್ಯವೂ-ಪರಸ್ಯವೂ ಆದ ಜೀವನವೆಲ್ಲವೂ ನಮ್ಮ ಮುಂದೆ ತೆರೆದಿರಿಸಲಾಗಿದೆ. ಲೋಕದಲ್ಲಿ ಇತರ ಯಾವುದೇ ವ್ಯಕ್ತಿಯ ಜೀವನವೂ ಇವರಂತೆ ಸುಸ್ಪಷ್ಟವಾಗಿ ದಾಖಲಿಸಲ್ಪಟ್ಟಿಲ್ಲ. ಹೀಗೆ ದಾಖಲಿಸಲ್ಪಟ್ಟಾಗ ಕೆಲವೊಮ್ಮೆ

ಆದರಣೀಯ ವ್ಯಕ್ತಿಗಳೂ ಅನಾದರಕ್ಕೆ ಒಳಗಾಗಬಹುದಾಗಿದೆ. ಆದರೆ, ಪ್ರವಾದಿ(ಸ)ರವರ ಜೀವನವನ್ನೊಮ್ಮೆ ನೋಡಿ, ಅವರ ಸ್ನಾನಗ್ರಹದಿಂದ ಶಯನ ಗೃಹದ ತನಕದ ಪ್ರವರ್ತನೆಗಳು ನಮಗೆ ಮಾದರೀ ಯೋಗ್ಯವಾಗಿದೆ. ಅವರು ಓರ್ವ ಪರಿಪೂರ್ಣ ವ್ಯಕ್ತಿಯಾಗಿದ್ದರು. ಮನುಷ್ಯತ್ವದ ಎಲ್ಲಾ ಗುಣಗಳು ಅವರ ಮೂಲಕ ಪ್ರತಿಫಲಿತಗೊಂಡಿದೆ. ಪ್ರವಚನಗಳು -ಉಪನ್ಯಾಸಗಳು ಮಾತ್ರ ಅವರು ಲೋಕದ ಜನರಿಗೆ ನೀಡಿದ ಕೊಡುಗೆಯಲ್ಲ. ಅವರು ತನ್ನ ಸ್ವಂತ ಜೀವನವನ್ನು ತನ್ನ ಆದರ್ಶಗಳ ಪ್ರಯೋಗಕ್ಕಾಗಿ ಮೀಸಲಿರಿಸಿ ಸ್ವಯಂ ಆದರ್ಶದ ಪ್ರತೀಕವಾಗಿ ಪ್ರವರ್ತಿಸಿದ್ದು ಅವರ ಅತ್ಯಂತ ದೊಡ್ಡ ವಿಜಯಕ್ಕೆ ಸಾಕ್ಷಿಯಾಗಿದೆ. ಲಾಮರ್ಟಿನ್ ಬರೆದರು, **ತತ್ವಜ್ಞಾನಿ, ಪ್ರಭೋದಕ, ದೇವನ ಸಂದೇಶವಾಹಕ, ಜೀವನದ ಸಂವಿದಾನ ನಿರ್ಮಾಪಕ, ಸೇನಾನಿ, ಆದರ್ಶವಾದಿ, ಅಸಂಬದ್ಧ ಆಶಯಗಳಿಂದ ಮುಕ್ತವಾದ ಸದಾಚಾರ ಮತ್ತು ಯುಕ್ತಿಪೂರ್ಣವಾದ ವಿಶ್ವಾಸ ಪ್ರಮಾಣಗಳ ಪುನರ್ನಿಮಾಪಕ, ಇಪ್ಪತ್ತು ಭೌತಿಕ ಸಾಮ್ರಾಜ್ಯಗಳ ಸಂಸ್ಥಾಪಕ.. ಇದೆಲ್ಲವೂ ಆಗಿದ್ದರು ಮುಹಮ್ಮದ್(ಸ).** ಮನುಷ್ಯನ ಮಹತ್ವವನ್ನು ಅರಿಯುವ ಎಲ್ಲಾ ಮಾನದಂಡಗಳಿಂದ ಪರಿಶೋಧಿಸಿ ಸುವ್ಯಕ್ತವಾಗಿ ಮೂಡುವ ಅಭಿಪ್ರಾಯದ ಆಧಾರದಲ್ಲಿ ಧ್ವಣಿ ಎತ್ತಿ ಕೇಳಬಹುದು. ಮುಹಮ್ಮದ್(ಸ)ಗಿಂತ ಮಹಾನರಾದ ಇನ್ನಾರಾದರೂ ಇದ್ದಾರೆಯೇ...?

(La Matrin History of a Turquie - Vol II Page - 277)

ಜನಿಸುವುದಕ್ಕಿಂತ ಮೊದಲೇ ತಂದೆ, ಏಳು ವರ್ಷಕ್ಕೆ ತಲುಪಿದಾಗ ತಾಯಿ ಮರಣ ಹೊಂದಿದ್ದ ಮುಹಮ್ಮದ್(ಸ) ಅನಾಥರಾಗಿಯೇ ಬೆಳೆದರು. ಅನಾಥರಾಗಿದ್ದರಿಂದ ಅಂದು ಅರೇಬಿಯಾದಲ್ಲಿ ಲಭಿಸಬೇಕಾಗಿದ್ದ ಸಂರಕ್ಷಣೆಯಿಂದ ಅವರು ವಂಚಿತರಾದರು. ಶಿಕ್ಷಣ ಲಭಿಸದ ಕಾರಣದಿಂದ ಓದು-ಬರಹವಿಲ್ಲದೆ ನಿರಕ್ಷರಿಯಾಗಿ ಅವರು ಜೀವಿಸಿದರು. ಬಾಲ್ಯದಲ್ಲಿ ಅರಬಿ ಬಾಲಕರೊಂದಿಗೆ ಕುರಿ ಮೇಯಿಸಿದರು. ಯುವಕರಾದಾಗ ವ್ಯಾಪಾರದಲ್ಲೇರ್ಪರು. ಅವರ ಜೀವನ ಮತ್ತು ಸಹವಾಸವೆಲ್ಲವೂ ಸಾಮಾನ್ಯ ಅರಬಿಗಳೊಂದಿಗಾಗಿತ್ತು. ಕುಡುಕರು, ಸ್ತ್ರೀ ಪೀಡಕರು, ಜಗಳಗಂಟರು ಮತ್ತು ವಿಗ್ರಹಾರಾಧಕರೂ ಆದ ಅರಬಿಗಳ ಸಮೂಹದೊಂದಿಗಾಗಿತ್ತು. ಆದರೂ ಅವರ ದುಸ್ವಭಾವಗಳಾವುದೂ ಮುಹಮ್ಮದ್(ಸ)ರನ್ನು ಸೋಂಕಲಿಲ್ಲ. ಒಂದರೆ ಕ್ಷಣ ಕೂಡಾ ವಿಗ್ರಹಗಳ ಮುಂದೆ ತಲೆ ತಗ್ಗಿಸಿಕೊಂಡು ಅವರು ನಿಂತಿರಲಿಲ್ಲ. ಸುಳ್ಳೊ... ಅಸಭ್ಯ ಮಾತುಗಳೋ ಅವರಿಂದ ಯಾರು ಆಲಿಸಿರಲಿಲ್ಲ. ವಂಚನೆಯೊ ದ್ರೋಹವೊ ಮಾಡಿದ್ದಾಗಿ ಅವರನ್ನು ಯಾರೂ ಎಂದು ದೂರಿದವರಿಲ್ಲ. ಅನ್ಯರ ಒಂದು ನಯಾ ಪೈಸೆಯನ್ನು ಅವರು ಕಬಳಿಸಿದ್ದಾಗಿ ಯಾರೂ ಹೇಳಿಲ್ಲ. ದುಃಖ ಮತ್ತು ಬೇಸರ ಅನುಭವಿಸುವವರ ನೋವನ್ನು ಹಂಚಿಕೊಳ್ಳಲು ಹಾತೊರೆಯುತ್ತಿದ್ದವರಾಗಿದ್ದರು ಅವರು. ಅನಾಥರು ಮತ್ತು ವಿಧವೆಯರನ್ನು ಸಾಂತ್ವನಪಡಿಸಲು ಅವರು ಮುಂಪಂಕ್ತಿಯಲ್ಲಿರುತ್ತಿದ್ದರು. ಬಡವರ-ದುರ್ಬಲರ ಸಂಕಷ್ಟಗಳನ್ನು ಪರಿಹರಿಸಿಕೊಡಲು ಅವರು ನಿರಂತರ ಪರಿಶ್ರಮಿಸುತ್ತಿದ್ದರು. ಹಸಿದವರಿಗೆ ಆಹಾರ ನೀಡಲು, ಯಾತ್ರಿಕರಿಗೆ ಶುಶ್ರೂಷೆ ಮಾಡಲು, ಜನರಲ್ಲಿ ಐಕ್ಯತೆಯನ್ನುಂಟು ಮಾಡಲು, ಜನರ ನಡುವಿನ ಭಿನ್ನಾಭಿಪ್ರಾಯವನ್ನು

ಶಮನಗೊಳಿಸಲು ಅವರು ಪ್ರಯತ್ನಿಸುತ್ತಿದ್ದರು. ಎಲ್ಲಾ ವಿಧದ ಮಾಲಿನ್ಯಗಳ ಆಡುಂಬೋಲವಾಗಿದ್ದ ಆ ಸಮೂಹದ ಯಾವುದೇ ಮಾಲಿನ್ಯವು ತನಗೆ ಅಂಟಿಕೊಳ್ಳದಂತೆ ಎಚ್ಚರಿಕೆ ವಹಿಸಿ ಅವರು ಜೀವಿಸಿದರು. ಅವರ ಈ ಎಲ್ಲಾ ಉತ್ತಮ ಸ್ವಭಾಗಳನ್ನೂ ಆ ಸಮೂಹವು ಅಂಗೀಕರಿಸಿತು. ಅವರ ಸತ್ಯಸಂಧತೆಯಲ್ಲಿ ಅವರಿಗೆಲ್ಲಾ ಅತೀವ ವಿಶ್ವಾಸವಿತ್ತು. ಅವರ ಸತ್ಯಸಂಧತೆಗೆ ಅಂಗೀಕಾರವಾಗಿ ಆ ಸಮೂಹವು ಅವರನ್ನು ಅಲ್-ಅಮೀನ್, ವಿಶ್ವಸ್ಥ, ಸತ್ಯ ಸಂಧನೆಂದು ಅಭಿ ಸಂಬೋಧಿಸಿತು.

ನಲ್ವತ್ತನೇ ವಯಸ್ಸಿನಲ್ಲಿ ಮುಹಮ್ಮದ್(ಸ)ರಿಗೆ ಪ್ರವಾದಿತ್ವ ಲಭಿಸಿತು. ಪ್ರಪಂಚದ ಅತ್ಯಂತ ದೊಡ್ಡ ಸತ್ಯವನ್ನು ಅವರು ಪ್ರಖ್ಯಾಪಿಸಿದರು. ಈ ಲೋಕವನ್ನು ಸೃಷ್ಠಿಸಿ-ಪಾರಿಪಾಲನೆ ಮಾಡುತ್ತಿರುವ ಅಲ್ಲಾಹನನ್ನು ಮಾತ್ರ ಆರಾಧಿಸಬೇಕು. ಅವನು ನಿಯುಕ್ತಗೊಳಿಸಿದ ಪ್ರವಾದಿಗಳ ಶೃಂಖಲೆಯ ಕಟ್ಟ-ಕಡೆಯ ಕೊಂಡಿಯಾಗಿದ್ದೇನೆ ನಾನು, ನನ್ನನ್ನು ಅನುಸರಿಸಿರಿ. ಈ ಜೀವನದ ಅಂತ್ಯವೆನಿಸಲಿರುವ ಮರಣವು ಮತ್ತೊಂದು ಜೀವನದ ಪ್ರಾರಂಭವಾಗಿದೆ. ಮರಣಾ ನಂತರದ ಜೀವನದಿ ಈ ಲೋಕದ ಜೀವನದಲ್ಲಿ ಪ್ರವರ್ತಿಸಲಾದ ಎಲ್ಲಾ ಪ್ರವರ್ತನೆಗಳಿಗೂ ತಕ್ಕ ಪ್ರತಿಫಲವನ್ನು ನೀಡಲಾಗುವುದು. ಸತ್ಕರ್ಮಗಳಿಂದ ಜೀವನವನ್ನು ಸಂಪನ್ನಗೊಳಿಸಿದವರಿಗೆ ಸ್ವರ್ಗೀಯ ಸುಖಾನುಭೂತಿಗಳು ಸಿದ್ದಿಸುತ್ತದೆ. ಅದೇ ಕೆಡುಕು ಪ್ರವರ್ತಿಸುತ್ತಾ ಜೀವನವನ್ನು ವ್ಯರ್ಥಗೊಳಿಸಿದವರಿಗೆ ನರಕದ ಭಯಾನಕ ಯಾತನೆಗಳನ್ನು ಅನುಭವಿಸಬೇಕಾಗುತ್ತದೆ. ಪರಲೋಕದಲ್ಲಿ ಸ್ವರ್ಗವನ್ನು ಸಂಪಾದಿಸುವುದು ಮನುಷ್ಯನ ಜೀವನದ ಪ್ರಥಮ ಗುರಿಯಾಗಿರಬೇಕು. ಆ ಗುರಿಯನ್ನು ತಲಪಲು ದೇವನ ಸಂದೇಶವಾಹಕರ ಜೀವನ ಚರ್ಯೆಯನ್ನು ಅನುಸರಿಸುವುದು ಅನಿವಾರ್ಯವಾಗಿದೆ. ಇದು ಮುಹಮ್ಮದ್(ಸ)ರವರ ಉಪದೇಶಗಳ ಸಾರವಾಗಿದೆ.

ಸತ್ಯದ ಹಾದಿಯಲ್ಲಿ ನಡೆಯಬೇಕೆಂದು ಉಪದೇಶಿಸಿದ್ದ ಗತ ಪ್ರವಾದಿಗಳಂತೆ ಮುಹಮ್ಮದ್(ಸ)ರವರೂ ಮರ್ದನಕ್ಕೂ-ಅಪಮಾನಕ್ಕೂ ಒಳಗಾಗಬೇಕಾಯಿತು. ಆದರೂ ಸತ್ಯದ ಪ್ರಕಾಶವನ್ನು ಕಂಡುಕೊಂಡ ಜನರು ಅವರನ್ನು ಅಂಗೀಕರಿಸಿದರು. ಇದನ್ನು ಕಂಡ ಅಂಧಾಕಾರದ ಉಪವಾಸಕರು ಕುಪಿತಗೊಂಡರು. ಅವರು ಮರ್ದನವನ್ನು ತೀವ್ರಗೊಳಿಸಿದರು. ಪ್ರವಾದಿ(ಸ)ಯ ಅನುಯಾಯಿಗಳಲ್ಲಿ ಹಲವರು ಕೊಲ್ಲಲ್ಪಟ್ಟರು. ಕೆಲವರು ಕ್ರೂರ ಮರ್ದನಗಳಿಗೆ ಒಳಗಾದರು. ಸತ್ಯದಲ್ಲಿ ಅಚಲರಾಗಿ ನಿಂತುಕೊಂಡು ಜನಿಸಿದ-ಬೆಳೆದು ಬಂದ ನಾಡನ್ನೇ ತ್ಯಜಿಸಿ ಪ್ರವಾದಿಗಳು ಮತ್ತು ಅವರ ಅನುಯಾಯಿಗಳು ಪಲಾಯನ ಮಾಡಿದರು. ತಮ್ಮ ವಿಶ್ವಾಸವನ್ನು ಸಂರಕ್ಷಿಸಿಕೊಳ್ಳಲು ಸ್ವಂತ ಊರು, ಮನೆ, ಕುಟುಂಬಾದಿಗಳನ್ನು ಉಪೇಕ್ಷಿಸಿ ಮದೀನಾಕ್ಕೆ ವಲಸೆ ಬಂದರು. ಅಸತ್ಯದ ವಕ್ತಾರರು ಅಲ್ಲಿ ಕೂಡಾ ಅವರನ್ನು ನೆಮ್ಮದಿಯಿಂದ ಇರಲು ಬಿಡಲಿಲ್ಲ. ಸತ್ಯವಿಶ್ವಾಸವನ್ನು ಸಂರಕ್ಷಿಸಲಿಕ್ಕಾಗಿ ಕಟ್ಟಕಡೆಗೆ ಪ್ರವಾದಿ(ಸ)ಗಳು ಮತ್ತು ಅವರ ಸಹವರ್ತಿಗಳು ಶಸ್ತ್ರ ಕೈಗೆತ್ತಿಕೊಳ್ಳಬೇಕಾಯಿತು. ಯುದ್ಧಗಳು!.. ಸಮರಗಳು! ಸಂಘರ್ಷ!.. ಸತ್ಯದ ಸಂರಕ್ಷಣೆಗಾಗಿ ನೂರಾರು ಸಂಖ್ಯೆಯ ಜನರು ಜೀವನವನ್ನು ತ್ಯಾಗ ಮಾಡಬೇಕಾಗಿ ಬಂತು. ಕಡೆಗೆ ಸತ್ಯಕ್ಕೆ ಜಯವಾಯಿತು. ಸಂಪೂರ್ಣ ಅರಬ್ ಜಗತ್ತು ಪ್ರವಾದಿ(ಸ)ರವರ ಅಧೀನಕ್ಕೆ ಬಂತು.

ಇಪ್ಪತ್ತಮೂರು ವರ್ಷಗಳಲ್ಲಿ ಎಂತಹಾ ಪರಿವರ್ತನೆಗಳಾಗಿದೆ ಪ್ರವಾದಿ(ಸ)ರಿಂದ ಉಂಟಾಗಿದ್ದೆಂದು ಒಮ್ಮೆ ಚರಿತ್ರೆಯಲ್ಲಿ ದೃಷ್ಟಿ ಹಾಯಿಸಿದರೆ ಅವರು ಪ್ರತಿಪಾದಿಸಿದ ಆದರ್ಶವು ಎಷ್ಟೊಂದು ಪಾವನವಾದದ್ದೆಂದು ಮನವರಿಕೆಯಾಗುತ್ತದೆ. ಮುಹಮ್ಮದ್(ಸ)ರವರ ಆಗಮನಕ್ಕೆ ಮೊದಲಿನ ಮತ್ತು ನಂತರದ ಅರಬರ ಜೀವನ ಶೈಲಿಯನ್ನೊಮ್ಮೆ ಪರಿಶೋಧಿಸಿರಿ. ಕುಲ-ಗೋತ್ರಗಳ ಹೆಸರಲ್ಲಿ ಪರಸ್ಪರ ಹರಿದು ಹಂಚಿಹೋಗಿದ್ದ, ರಾಜಕೀಯವಾಗಿಯೂ-ಸೈನಿಕವಾಗಿಯೂ ಸಂಪೂರ್ಣ ಅಸಂಘಟಿತರಾಗಿದ್ದ, ಸರಿಯಾದ ಕೃಷಿ ಸೌಕರ್ಯಗಳೇನೂ ಇಲ್ಲದ ಕೃಷಿ ಕ್ಷೇತ್ರದಲ್ಲಿ ಸಂಪೂರ್ಣ ಹಿಂದುಳಿದಿದ್ದ, ಶೈಕ್ಷಣಿಕ ರಂಗದಲ್ಲಿ ಶೂನ್ಯ ಸ್ಥಿತಿಯಲ್ಲಿದ್ದ, ವೈದ್ಯಕೀಯ ರಂಗದಲ್ಲಿ ಮೈಲುಗಟ್ಟಲೆ ಹಿಂದಿದ್ದ, ಅಂಧ ವಿಶ್ವಾಸವು ಸೃಷ್ಟಿಸಿದ ಅಧಮತ್ವದಲ್ಲಿ ಮುಳುಗಿ ಹೋಗಿ ಮದ್ಯಪಾನದಲ್ಲೂ ವ್ಯಭಿಚಾರದಲ್ಲೂ ಬಿದ್ದು ಮತಿಗೆಟ್ಟು ಹೋಗಿದ್ದ ಒಂದು ಸಮೂಹ. ಇದಾಗಿತ್ತು ಪ್ರವಾದಿಗಳ ನಿಯೋಗಕ್ಕಿಂತ ಹಿಂದಿನ ಅರೇಬಿಯಾದ ಚಿತ್ರ. ಇನ್ನು ಮುಹಮ್ಮದ್(ಸ)ರ ಆಗಮನದ ನಂತರ ಅರೇಬಿಯಾದ ಚಿತ್ರವನ್ನು ಪರಿಶೋಧಿಸಿ ನೋಡಿ. ಸುಸಂಸ್ಕೃತವೂ ಆದರ್ಶಪ್ರಾಯವೂ ಆದ ಒಂದು ಸಮೂಹವನ್ನು ನಮಗಲ್ಲಿ ಕಾಣಬಹುದಾಗಿದೆ. ಅಲೆಕ್ಸಾಂಡ್ರಿಯಕ್ಕಿಂತ ದೊಡ್ಡ ಸಂಸ್ಕಾರ ಕೇಂದ್ರವಾಗಿ ಅರೇಬಿಯಾವು ಪರಿವರ್ತಿತವಾಯಿತು. ವಿಜ್ಞಾನಿಕ ಕ್ಷೇತ್ರದಲ್ಲಿ ಅಂದು ಔನ್ನತ್ಯ ಸಾಧಿಸಿದ ಗ್ರೀಕರನ್ನು ಹಿಂದಿಕ್ಕಲು ಅವರಿಗೆ ಸಾಧ್ಯವಾಯಿತು. ನೂರಾರು ವರ್ಷ ಹಳೆಯದಾದ ರೋಮನ್ ಸಾಮ್ರಾಜ್ಯವೂ ಪರ್ಷಿಯನ್ ಆದಿಪತ್ಯವೂ ಅವರ ಮುಂದೆ ಕಂಪಿಸತೊಡಗಿತು. ಗೋತ್ರ ಕಲಹದಿಂದ ಭಿನ್ನ-ವಿಭಿನ್ನರಾಗಿದ್ದ ಅವರು ಐಕ್ಯತೆಯ ಧ್ವಜವಾಹಕರಾದರು. ಧರ್ಮಾಧರ್ಮದ ಮಧ್ಯೆ ಭೇದ ಅರಿತುಕೊಂಡಿರದಿದ್ದ ಅವರು ಸದ್ಧರ್ಮದ ಸುಂದರ ತತ್ವಾದರ್ಶಗಳ ಪ್ರಚಾರಕರಾದರು. ಇದಾಗಿದೆ ಪ್ರವಾದಿ(ಸ) ಸೃಷ್ಟಿಸಿದ ವಿಪ್ಲವ.

ನಾಗರಿಕ ಲೋಕದಲ್ಲಿ ಶೂನ್ಯದ ಸ್ಥಿತಿಯಲ್ಲಿದ್ದ ಒಂದು ಜನ ಸಮುದಾಯವನ್ನು ಕೇವಲ ಇಪ್ಪತ್ತಮೂರು ವರ್ಷಗಳ ಅವಧಿಯಲ್ಲಿ ನಾಗರಿಕತೆಯ ಪರಮೋಚ್ಛ ಸ್ಥಾನಕ್ಕೆ ಕೊಂಡೊಯ್ದ ಇದಕ್ಕೆ ಹೊರತಾಗಿ ಒಂದು ಕ್ರಾಂತಿಯನ್ನು ಲೋಕದ ಚರಿತ್ರೆಯಲ್ಲಿ ಕಂಡುಕೊಳ್ಳಲು ಸಾಧ್ಯವೇ?

ಪ್ರವಾದಿ(ಸ) ಇಂತಹಾ ಒಂದು ಮಹತ್ತರ ಬದಲಾವಣೆಯನ್ನು ಸಾಧಿಸಿದ್ದು ಹೇಗೆ? ಈ ನೆಲೆಯಲ್ಲಿ ಅವರು ಉಪಯೋಗಿಸಿದ ಧಿವ್ಯ ಔಷಧಿ ಅದು ದೇವ ವಿಶ್ವಾಸ ಮತ್ತು ಪರಲೋಕದ ಕುರಿತಾದ ನಂಬಿಕೆ ಎನ್ನುವುದಾಗಿತ್ತು. ಅವರು ಜನ ಮಾನಸದಲ್ಲಿ ಈ ನಂಬಿಕೆಗಳನ್ನು ಆಳವಾಗಿ ಬೇರೂರಿಸಿದರು. ಅನಶ್ವರವಾದ ಮರಣಾ ನಂತರದ ಜೀವನಕ್ಕಾಗಿ ಈ ಲೋಕವು ಕೃಷಿ ಭೂಮಿಯಾಗಿದೆ ಎಂಬ ವಿಶ್ವಾಸ ಅವರ ಹೃದಯದಲ್ಲಿ ಬೆಳೆದು ಬಂದಾಗ ಇಹದಲ್ಲಿ ಎಂತಹಾ ತ್ಯಾಗವನ್ನಾದರೂ ಸಹಿಸಿಕೊಂಡು ಪರಲೋಕದಲ್ಲಿ ಸುಖವನ್ನು ಸಂಪಾದಿಸಬೇಕೆಂಬ ಆಗ್ರಹವು ಅವರಲ್ಲಿ ಉಂಟಾಯಿತು. ಸೃಷ್ಟಿಕರ್ತನೂ-ಸಂರಕ್ಷಕನೂ ಆದ ಒಡೆಯನಿಗಾಗಿ ಸ್ವಂತ ಜೀವನವನ್ನು ಸಮರ್ಪಿಸಲು ಅವರು ಸಿದ್ಧರಾದರು. ಸೃಷ್ಟಿಕರ್ತನ ವಿಧಿ-ನಿರ್ದೇಶನಗಳನ್ನು ಅಂಗೀಕರಿಸಿಕೊಂಡು, ಅದನ್ನು ಜೀವನದಲ್ಲಿ ಪರಿಪೂರ್ಣ ರೂಪದಲ್ಲಿ ಪಾಲಿಸಿಕೊಂಡು ಮುಂದೆ ಹೋದಾಗ ಅವರು ಮನುಷ್ಯತ್ವದ ಉಜ್ವಲವಾದ

ಮಾದರಿ ಪುರುಷರಾಗಿ ಮಾರ್ಪಟ್ಟರು. ದೇವನಿಗೆ ತಮ್ಮ ಸರ್ವಸ್ವವನ್ನೂ ಸಮರ್ಪಿಸುವ ಮೂಲಕ ಅವರು ಮನುಷ್ಯರ ಪೈಕಿ ಉತ್ಕೃಷ್ಟರಾದ ಮುಸ್ಲಿಮರಾದರು. ಇಸ್ಲಾಮ್ ಎನ್ನುವ ಪದದ ಅರ್ಥವೂ ಸಮರ್ಪಣೆ, ಶಾಂತಿ ಎಂದಾಗಿರುತ್ತದೆ. ಸೃಷ್ಟಿಕರ್ತನಾದ ಅಲ್ಲಾಹನಿಗೆ ಸ್ವಂತ ಜೀವನವನ್ನು ಸಂಪೂರ್ಣವಾಗಿ ಸಮರ್ಪಣೆ ಮಾಡಿದಾಗ ಲಭಿಸುವ ಶಾಂತಿ-ಸಮಾಧಾನವೇ 'ಇಸ್ಲಾಮ್' ಎಂದು ಹೇಳಬಹುದಾಗಿದೆ. ಮುಹಮ್ಮದ್(ಸ)ರವರ ಕುರಿತಾಗಿ ಯೆರೆಮೀಯ ಪ್ರವಾದಿಯ ಭವಿಷ್ಯವಾಣಿಯನ್ನು ನೋಡೋಣ **"ಶಾಂತಿಯನ್ನು ಬೋಧಿಸುವ ಪ್ರವಾದಿಯ ಕುರಿತು ಹೇಳುವುದಾದರೆ, ಅವರ ವಚನಗಳೆಲ್ಲವೂ ಒಂದೊಂದಾಗಿ ಸತ್ಯವಾಗಿ ಸಾಕ್ಷತ್ಕರಿಸಲ್ಪಡುವಾಗ ಅವರನ್ನು ದೇವನೇ ಕಳುಹಿಸಿದ್ದೆನ್ನುವುದು ದೃಢವಾಗುತ್ತದೆ."**(ಈರೇಮ್ಯಾ 28:9) ಮುಹಮ್ಮದ್(ಸ)ರವರು ಬೋಧಿಸಿದ ಶಾಂತಿ `ಇಸ್ಲಾಮ್' ಆಗಿತ್ತು. ಸಂಪೂರ್ಣ ಶಾಂತಿಯ ಮಾರ್ಗ.

## ಅದ್ಭುತಗಳಲ್ಲಿ ಅದ್ಭುತವೆನಿಸಿದ ಗ್ರಂಥ

ಅಂತ್ಯ ಪ್ರವಾದಿಯ ಮೂಲಕ ಅವತೀರ್ಣವಾದ ಗ್ರಂಥವಾದ ಪವಿತ್ರ ಕುರ್‌ಆನ್ ಅದ್ಭುತಗಳ ಅದ್ಭುತವೆನ್ನುವುದು ವಾಸ್ತವಾಗಿದೆ. ಪ್ರಾರಂಭದಲ್ಲಿ ಕುರಿಮೇಯುಸುತ್ತಿದ್ದು ಬಳಿಕ ವ್ಯಾಪಾರದಲ್ಲಿ ಏರ್ಪಟ್ಟ ಓರ್ವ ಮನುಷ್ಯ. ಅವರಿಗೆ ಓದು ಬರಹದ ಜ್ಞಾನವಿರಲಿಲ್ಲ. ನಲ್ವತ್ತು ವರ್ಷಗಳ ತನಕ ಯಾವುದೇ ರೀತಿಯ ಸಾಹಿತ್ಯಾಭಿರುಚಿಯನ್ನೂ ಅವರು ಪ್ರಕಟಿಸಿರಲಿಲ್ಲ. ನಲ್ವತ್ತು ವರ್ಷದಲ್ಲಿ ಅವರು ಸುಂದರವೂ-ಸ್ವಾರಸ್ಯಕರವೂ ಆದ ಪದಗಳನ್ನು ಉಚ್ಚರಿಸ ತೊಡಗಿದರು. ಗದ್ಯವೂ-ಪದ್ಯವೂ ಅಲ್ಲದ ಶೈಲಿಯಲ್ಲಿ ಯಾರಲ್ಲೇ ಆದರೂ ವಿಸ್ಮಯವನ್ನುಂಟು ಮಾಡಬಲ್ಲಂತಹಾ ಸಂದೇಶಗಳಾಗಿತ್ತದು. ಆ ತನಕದ ಯಾವುದೇ ವೇದ ಗ್ರಂಥಗಳು ಕಂಡಿಲ್ಲದಂತಹಾ ಅವರ ವಾಕ್ಯಗಳಲ್ಲಿ ಅತುಲ್ಯವಾದ ನಿರ್ದೇಶನಗಳಿವೆ. ಯಾವುದೇ ಪೂರ್ವಿಕ ಗ್ರಂಥಗಳನ್ನು ಕಲಿತಿರದಂತಹಾ ಅವರ ಪದಗಳಲ್ಲಿ ಧಾರ್ಮಿಕ ನಿಯಮ ನಿರ್ದೇಶನಗಳಿದ್ದವು. ಯಾವುದೇ ಚರಿತ್ರೆಯನ್ನು ಕಲಿತಿರದ ಅವರ ಮಾತುಗಳಲ್ಲಿ ಗತಕಾಲದ ಚರಿತ್ರೆಗಳಿದ್ದವು. ಅದಾಗಿದೆ ಪವಿತ್ರ ಕುರ್‌ಆನ್ ಎಂಬ ಅದ್ಭುತ. ಮುಹಮ್ಮದ್(ಸ) ಎಂಬ ನಿರಕ್ಷರಿಯೊಬ್ಬರ ತುಟಿಗಳಿಂದಾಗಿತ್ತು ಅದನ್ನು ಲೋಕವು ಆಲಿಸಿದ್ದು. ಆದರೆ, ಅದರ ಶೈಲಿ, ರೂಪ, ಕ್ರಮಗಳೆಲ್ಲವೂ ಅದು ಮುಹಮ್ಮದ್(ಸ)ರ ರಚನೆ ಅಲ್ಲವೆನ್ನುವುದನ್ನು ಸಾರಿ ಹೇಳುತ್ತಿತ್ತು. ಸಾಹಿತ್ಯ, ವಿಜ್ಞಾನ, ನಿಯಮ ಸಂಹಿತೆ, ಚರಿತ್ರೆ ಎಲ್ಲವನ್ನೂ ಬಲ್ಲ ಯಾರೋ ಅದನ್ನು ಅವರಿಗೆ ಬರೆದುಕೊಟ್ಟಿರಬೇಕು. ವಿಶುದ್ಧ ಕುರ್‌ಆನಿನೊಂದಿಗೆ ಜಗತ್ತಿನ ಮುಂದೆ ಪ್ರತ್ಯಕ್ಷರಾದ ವ್ಯಕ್ತಿ ಜೀವನದಲ್ಲಿ ಒಂದೇ ಒಂದು ಸುಳ್ಳನ್ನೂ ಹೇಳಿದವರಲ್ಲ. ವಂಚನೆ ಮಾಡಿದವರಲ್ಲ ಎಂಬ ವಾಸ್ತವಿಕತೆಯನ್ನೊಮ್ಮೆ ಮನವರಿಕೆ ಮಾಡಿಕೊಂಡರೆ, ಅತುಲ್ಯವಾದ ಸಾಹಿತ್ಯ ಶೈಲಿಯಲ್ಲಿ ರಚಿತಗೊಂಡ ಕುರ್‌ಆನಿನೊಂದಿಗೆ ಮನುಷ್ಯರ ಮಧ್ಯೆ ಇಳಿದು ಬಂದ ಅವರು(ಸ) ಸಾರಿ ಹೇಳಿದ್ದು ಕೂಡಾ ಇದು ನನ್ನ ರಚನೆ ಅಲ್ಲ ಎನ್ನುವುದನ್ನಾಗಿದೆ. ಸಾಹಿತಿಗಳಿಗೆ ಉನ್ನತವಾದ ಸ್ಥಾನವನ್ನು ಕಲ್ಪಿಸಿಕೊಡುತ್ತಿದ್ದ ಅರೇಬಿಯನ್ ಸಮುದಾಯದಲ್ಲಿ ಅತ್ಯಂತ ಸುಂದರವಾದ ಸಾಹಿತ್ಯ ಕೃತಿಯೊಂದಿಗೆ ಮುಹಮ್ಮದ್(ಸ) ಪ್ರತ್ಯಕ್ಷರಾದರು. ಅದನ್ನು ಅವರು ತನ್ನ ರಚನೆ ಎಂದು ಹೇಳುತ್ತಿದ್ದರೆ, ಇಡೀ

ಅರಬ್ ಜಗತ್ತು ಅವರನ್ನು ಸಾಹಿತಿಗಳಲ್ಲೇ ಶ್ರೇಷ್ಟನೆಂದು ಪರಿಗಣಿಸಿ ಆದರಿಸುತ್ತಿತ್ತು. ಆದರೆ ಅವರು(ಸ) ಸಾರಿ ಹೇಳಿದ್ದು ಅದು ತನ್ನ ಕೃತಿ ಎಂದಲ್ಲ, ಸರ್ವ ಜ್ಞಾನಿಗಳು ಮತ್ತು ವಿಜ್ಞಾನಿಗಳಿಗಿಂತಲೂ ಅಗಾಧವಾದ ಜ್ಞಾನಬಲವುಲ್ಲ ದೇವನು ತನಗೆ ನೀಡಿದ ಕೊಡುಗೆ ಎಂದಾಗಿತ್ತು. ಜೀವನದಲ್ಲಿ ಒಮ್ಮೆಯೂ ಸುಳ್ಳು ಹೇಳಿರದ ವ್ಯಕ್ತಿ ಓರ್ವರು ಇದನ್ನು ಹೇಳುತ್ತಿದ್ದಾರೆನ್ನುವುದನ್ನು ಸ್ಮರಿಸಿರಿ. ವಿಶುದ್ಧ ಕುರ್‌ಆನಿನ ಶೈಲಿ ಮತ್ತು ಅದರಲ್ಲಿ ಅಡಕಗೊಂಡ ವಿಷಯಗಳೆಲ್ಲವೂ ಅದು ಒಂದು ವ್ಯಕ್ತಿಯ ರಚನೆಯಾಗಿರಲು ಸಾಧ್ಯವಿಲ್ಲವೆನ್ನುವುದಕ್ಕೆ ಸ್ವಯಂ ಸಾಕ್ಷ್ಯವಹಿಸುತ್ತದೆ.

ಇಂದು ಲೋಕದಲ್ಲಿ ನೆಲೆಗೊಂಡಿರುವ ವೇದ ಗ್ರಂಥಗಳಲ್ಲಿ ಸ್ವಯಂ ದೇವ ಗ್ರಂಥವೆಂದು ಘೋಷಿಸುವ ಏಕೈಕ ಗ್ರಂಥ ಪರಿಶುದ್ಧ ಕುರ್‌ಆನ್ ಮಾತ್ರವಾಗಿದೆ. ಅವತೀರ್ಣಗೊಂಡ ರೂಪದಲ್ಲಿ ಇಂದು ಕೂಡಾ ನೆಲೆ ನಿಂತಿರುವ ಏಕೈಕ ಗ್ರಂಥವೆಂಬ ಹೆಗ್ಗಳಿಕೆ ಕೂಡಾ ಪವಿತ್ರ ಕುರ್‌ಆನಿಗೆ ಮಾತ್ರ ದೊರಕುತ್ತದೆ. 23 ವರ್ಷಗಳ ಸುಧೀರ್ಘ ಅವಧಿಯಲ್ಲಿ ವಿಭಿನ್ನ ಪರಿಸ್ಥಿತಿಗಳಲ್ಲಿ ಅವತೀರ್ಣವಾಗುತ್ತಿದ್ದ ಕುರ್‌ಆನಿನ ವಚನಗಳಲ್ಲಿ ಪರಸ್ಪರ ವೈರುಧ್ಯಗಳು ಕಾಣುವುದಿಲ್ಲ. ಕುರ್‌ಆನಿನಲ್ಲಿರುವ ಧಾರ್ಮಿಕ ನಿಯಮಗಳೆಲ್ಲವೂ ಸರ್ವಕಾಲಿಕವಾಗಿದೆ. ಅದು ಪ್ರತಿಪಾದಿಸುವ ನಿಯಮ ಸಂಹಿತೆಯು ಅಮೂಲ್ಯವಾದುದಾಗಿದೆ. ಅದು ನೀಡುವ ಧಾರ್ಮಿಕ ಸದಾಚಾರ ನಿಯಮಗಳಿಗೆ ತುಲ್ಯವಾದುದು ಇನ್ನೊಂದು ಗ್ರಂಥದಲ್ಲಿಲ್ಲ. ಅದು ಕಲಿಸುವ ಚರಿತ್ರೆಯು ಕಳಂಕ ರಹಿತವೂ ಸತ್ಯ ಸಂಧವೂ ಆದುದಾಗಿದೆ. ಅದು ಎಲ್ಲಾ ಕಾಲದಲ್ಲೂ ಪ್ರಾಯೋಗಿಕವೆನ್ನುವುದು ಅದರ ಹಿರಿಮೆಯಾಗಿದೆ. ಎಲ್ಲಾ ಅರ್ಥದಲ್ಲೂ ಕಾರ್ಗತ್ತಲೆಯ ಕೂಪದಲ್ಲಿ ಜೀವಿಸುತ್ತಿದ್ದ ಒಂದು ಸಮೂಹವನ್ನು ಕೇವಲ 23 ವರ್ಷದ ಅವಧಿಯಲ್ಲೇ ನಾಗರಿಕತೆಯ ಔನ್ನತ್ಯಕ್ಕೇರಿಸಲು ಅದಕ್ಕೆ ಸಾಧ್ಯವಾಯಿತು. ಜಗತ್ತನ್ನು ಪರಿವರ್ತಿಸಲು ಕುರ್‌ಆನಿಗೆ ಪರ್ಯಾಯವಾದ ಇನ್ನೊಂದು ಗ್ರಂಥ ಮಾನವ ಚರಿತ್ರೆಯಲ್ಲಿ ಯಾವುದೂ ಕಂಡು ಬರುವುದಿಲ್ಲ. ಅದು ಕುರ್‌ಆನ್ ಮಾತ್ರವಾಗಿದೆ ಎಲ್ಲಾ ಅರ್ಥದಲ್ಲೂ ಪರಿಪೂರ್ಣವಾದ ದೇವಗ್ರಂಥ. ಸೂಕ್ಷ್ಮಾತಿ ಸೂಕ್ಷ್ಮವಾದ ಲೌಕಿಕ ಸಮಸ್ಯೆಗಳಿಗೂ ಪರಿಹಾರ ಸೂಚಿಸಬಲ್ಲ ಕುರ್‌ಆನಿನಂತಹಾ ಮತ್ತೊಂದು ಗ್ರಂಥವಿಲ್ಲ ಎನ್ನುವುದೇ ವಾಸ್ತವವಾಗಿದೆ.

**"ಇದು (ದೈವಿಕ) ಗ್ರಂಥ, ಸಂದೇಹಾತೀತವಿದು. ಭಯಭಕ್ತಿಯುಳ್ಳವರಿಗೆ ಇದು ಮಾರ್ಗದರ್ಶಿ"(2-2)**

ಹಿಂದಿನ ವೇದ ಗ್ರಂಥಗಳಂತೆ ಕುರ್‌ಆನ್ ಕೇವಲ ಒಂದು ಗ್ರಂಥವಲ್ಲ. ಅದು ಅಂತಿಮ ಪ್ರವಾದಿ(ಸ)ರವರಿಗೆ ಲಭಿಸಿರುವ ಅಮಾನುಷಿಕ ದೃಷ್ಟಾಂತವೂ ಆಗಿದೆ. ತಾನು ಅಲ್ಲಾಹನ ಸಂದೇಶವಾಹಕನೆನ್ನುವುದಕ್ಕಿರುವ ದೃಷ್ಟಾಂತ. ಹಿಂದಿನ ಪ್ರವಾದಿಗಳಿಗೆ ನೀಡಲಾಗಿದ್ದ ದೃಷ್ಟಾಂತಗಳೆಲ್ಲವೂ ಅವರು ಮರಣ ಹೊಂದಿದಾಗ ಮರೆಯಾಗಿ ಹೋದವು. ಆದರೆ ಅಂತ್ಯ ಪ್ರವಾದಿಗೆ ನೀಡಲಾದ ಈ ಅಮಾನುಷಿಕ ದೃಷ್ಟಾಂತವಾದರೊ ಅದು ಈ ಲೋಕದಲ್ಲಿ ಹುಟ್ಟುವ ಅಂತಿಮ ಮನುಷ್ಯನ ಮುಂದೆಯೂ ಒಂದು ಮಹಾ ಅದ್ಭುತವಾಗಿ ನೆಲೆ ನಿಲ್ಲುವುದು ಈ ಕುರ್‌ಆನನ್ನು ಒಂದು ಅಮಾನುಷಿಕ ಗ್ರಂಥವಾಗಿ ಎತ್ತಿಹಿಡಿಯುವ ಅಂಶವಾದರೂ ಏನು? ಅದರ ಶೈಲಿ, ಅದರ

ಪ್ರಭಾವ ಅದರಲ್ಲಿ ಒಳಗೊಂಡ ಪ್ರತೀ ಒಂದು ಅಕ್ಷರವೂ ಅಮಾನುಷಿಕತೆಗೆ ಸಾಕ್ಷಿಯಾಗಿದೆ. ಅರಬಿ ಭಾಷಾ ಸಾಹಿತ್ಯದಲ್ಲಿ ದಿಗ್ಗಜರು ಜೀವಿಸಿರುತ್ತಿದ್ದ ಕಾಲದಲ್ಲಿ ಅವರಿಗೆ ಸವಾಲಾಗಿ ಅವತೀರ್ಣಗೊಂಡ ಕುರ್‌ಆನಿನ ಸಾಹಿತ್ಯ ಕೃತಿಯನ್ನು ಹೋಲುವ ಒಂದು ಗ್ರಂಥ ಕೂಡಾ ಈ ತನಕ ಅರಬಿ ಭಾಷೆಯಲ್ಲಿ ರಚನೆಗೊಳ್ಳಲಿಲ್ಲ. ಇದರಂತೆ ಜನರ ಹೃದಯದಲ್ಲಿ ಪ್ರಭಾವ ಬೀರಿದ ಮತ್ತೊಂದು ಗ್ರಂಥವೂ ಲೋಕದ ಚರಿತ್ರೆಯಲ್ಲಿ ಕಾಣಲು ಸಿಗುವುದಿಲ್ಲ. ಓದುಗರ ಬುದ್ಧಿಗೆ ತೃಪ್ತಿಯನ್ನೂ, ಮನಸ್ಸಿಗೆ ಸಮಾಧಾನವನ್ನೂ ನೀಡುವುದರೊಂದಿಗೆ ಅವನ ಹೃದಯದಲ್ಲಿ ಪರಿವರ್ತನೆಯನ್ನು ಮಾಡುವ ಗ್ರಂಥವಾಗಿದೆ ಕುರ್‌ಆನ್. ಅದರ ಭವಿಷ್ಯವಾಣಿಗಳು ಅಕ್ಷರಸಃ ಸಾಕ್ಷಾತ್ಕಾರಗೊಂಡಿದೆ. ಪರಿಶುದ್ಧ ಕುರ್‌ಆನಿನ ಭವಿಷ್ಯವಾಣಿಗಳಲ್ಲಿ ಯಾವುದೂ ಪೂರ್ತೀಕರಿಸಲ್ಪಡದೇ ಹೋಗಿಲ್ಲ. ಅದರ ಪರಾಮರ್ಶೆಗಳಾವುದೂ ಅಸತ್ಯವೆಂದು ಸಾಬೀತುಗೊಳಿಸಲು ಲೋಕಕ್ಕೆ ಸಾಧಿಸಿಲ್ಲ. ವೈಜ್ಞಾನಿಕ ಕ್ಷೇತ್ರದಲ್ಲಿ ಲೋಕವು ಶೂನ್ಯವಾಗಿದ್ದ ಕಾಲದಲ್ಲಿ ರಚಿತಗೊಂಡ ಒಂದು ಗ್ರಂಥದಲ್ಲಿ. ಒಂದೇ ಒಂದು ಪ್ರಸ್ತಾಪ ಕೂಡಾ ತಪ್ಪೆಂದು ಸಾಬೀತುಗೊಳಿಸಲು ಆ ಕ್ಷೇತ್ರದಲ್ಲಿ ನಡೆದ ಕ್ರಾಂತಿಗಳಿಗೂ ಸಾಧ್ಯವಾಗಿಲ್ಲವೆನ್ನುವುದು ಅದ್ಭುತವಾದ ಸಂಗತಿಯಾಗಿದೆ. ಮಾತ್ರವಲ್ಲದೆ, ವಿಜ್ಞಾನವು ಹೊಸ ಹೊಸ ಅವಿಷ್ಕಾರಗಳನ್ನು ಮಾಡುವಾಗ ಕುರ್‌ಆನಿನ ಅಮಾನಿಷಿಕತೆಯು ಮತ್ತಷ್ಟು ಸ್ಪಷ್ಟವಾಗುತ್ತ ಹೋಗುತ್ತದೆ ಎನ್ನುವುದು ವಿಸ್ಮಯವಾಗಿದೆ. ಖಗೋಳ ಶಾಸ್ತ್ರದಲ್ಲಾಗಲಿ, ಭೂಗರ್ಭ ಶಾಸ್ತ್ರದಲ್ಲಾಗಲಿ-ಅಂತರ್ಜಲ ವಿಜ್ಞಾನದಲ್ಲೇ ಆಗಿರಲಿ ಯಾವುದೇ ಮೂಲಭೂತ ಸಂಗತಿಯೂ ಅರಿತಿರದಿದ್ದ ಕಾಲಘಟ್ಟದಲ್ಲಿ ಅವತೀರ್ಣಗೊಂಡರೂ ಕುರ್‌ಆನಿನ ವಚನಗಳು ಪ್ರಸ್ತುತ ಶಾಸ್ತ್ರಗಳಲ್ಲಿ ಉಂಟಾದ ಆಧುನಿಕ ಅವಿಷ್ಕಾರಗಳೊಂದಿಗೆ ಶೇಕಡಾ ನೂರರಷ್ಟು ಹೋಲಿಕೆ ಯಾಗುವುದೆನ್ನುವುದು ಅದು ಸರ್ವಾಂತರ್ಯಾಮಿಯೂ, ಸರ್ವಜ್ಞನೂ ಆದ ಅಲ್ಲಾಹನ ಕಡೆಯಿಂದ ಅವತೀರ್ಣವಾಗಿರುವುದೆನ್ನುವುದಕ್ಕೆ ಪ್ರಭಲ ಸಾಕ್ಷವನ್ನು ಒದಗಿಸುತ್ತದೆ.

## ಪ್ರವಾದಿಗಳೆಲ್ಲರ ಧರ್ಮ

ಮುಹಮ್ಮದ್(ಸ) ಇಸ್ಲಾಮಿನ ಸ್ಥಾಪಕರಲ್ಲ. ಅವರು ಇಸ್ಲಾಮಿನ ಏಕೈಕ ಪ್ರವಾದಿಯೂ ಅಲ್ಲ. ಅವರು ಇಸ್ಲಾಮಿನ ಕಟ್ಟ ಕಡೆಯ ಪ್ರವಾದಿ ಅಥವಾ ಸಂದೇಶವಾಹಕರಾಗಿದ್ದಾರೆ. ಗತ ಪ್ರವಾದಿಗಳೆಲ್ಲರ ಹಿಂಗಾಮಿಯಾಗಿರುವೆನೆಂದು ಅವರು ಘೋಷಿಸಿಕೊಂಡಿದ್ದಾರೆ. ನೋಹರನ್ನು, ಅಬ್ರಾಹಾಮರನ್ನು, ಮೋಸೆಸ್‌ರನ್ನು ಜೀಸಸ್‌ರನ್ನು ಮಾತ್ರವಲ್ಲ, ಲೋಕದಲ್ಲಿ ಎಲ್ಲೆಲ್ಲಾ ದೇವ ಸಂದೇಶವಾಹಕರು ಆಗತರಾಗಿರುವರೊ ಅವರೆಲ್ಲರ ಹಿಂಗಾಮಿ ನಾನೆಂದು ಅವರು ಸಾರಿ ಹೇಳಿದ್ದಾರೆ. ಸತ್ಯದ ಸಂದೇಶವಾಹಕರಾಗಿ ಸೃಷ್ಟಿಕರ್ತನು ಆರಿಸಿಕೊಂಡ ಪ್ರವಾದಿಗಳನ್ನು ನಿಯೋಗಿಸಿರದ ಒಂದೇ ಒಂದು ಸಮುದಾಯವು ಈ ಲೋಕದಲ್ಲಿ ಗತಿಸಿಲ್ಲವೆನ್ನುವುದು ವಾಸ್ತವವಾಗಿದೆ. ಪರಿಶುದ್ಧ ಕುರ್‌ಆನಿನ ವಚನಗಳನ್ನು ನೋಡಿರಿ.

**“ನಾವು ನಿಮ್ಮನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರಾಗಿ ಸತ್ಯ ಸಹಿತ ಕಳುಹಿಸಿರುತ್ತೇವೆ. ಎಚ್ಚರಿಕೆ ಕೊಡುವವರಾರೂ ಬಂದಿರದಂತಹ ಸಮುದಾಯ ಒಂದೂ ಗತಿಸಿಲ್ಲ’’**(35-24)

**"ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕರನ್ನು ಕಳುಹಿಸಿದೆವು ಮತ್ತು "ಅಲ್ಲಾಹನನ್ನೇ ಆರಾಧನೆ ಮಾಡಿರಿ ಮತ್ತು 'ತಾಗೂತ್'ನ ಆರಾಧನೆಯಿಂದ ದೂರವಿರಿ ಎಂದು ಅವರ ಮೂಲಕ ಎಚ್ಚರಿಕೆ ನೀಡಿದೆವು''(16-36)**

ಪ್ರಪಂಚ ಕಂಡ ಪ್ರವಾದಿಗಳೆಲ್ಲರೂ ಪ್ರತಿಪಾದಿಸಿದ ಧರ್ಮವು ಇಸ್ಲಾಮ್ ಆಗಿದೆ. ಇಸ್ಲಾಮ್ ಎಂದರೆ ಸರ್ವಶಕ್ತನಾದ ಸೃಷ್ಟಿಕರ್ತನ ಮುಂದೆ ಸಂಪೂರ್ಣವಾಗಿ ಶರಣಾಗುವುದು ಎಂದರ್ಥ. ಈ ಸಮರ್ಪಣೆಗಳು ಹೇಗೆ ಸಾಧಿಸುತ್ತದೆನ್ನುವುದನ್ನು ಪ್ರಾಯೋಗಿಕವಾಗಿ ತೋರಿಸಿ ಕೊಡಲು ಪ್ರವಾದಿಗಳನ್ನು ನಿಯುಕ್ತಿಗೊಳಿಸಲಾಗಿದೆ. ಮುಹಮ್ಮದ್(ಸ) ಪ್ರವಾದಿಗಳ ಶೃಂಖಲೆಯ ಅಂತಿಮ ಕೊಂಡಿಯಾಗಿದ್ದಾರೆಂದು ಈ ಮೊದಲೇ ಹೇಳಲಾಗಿದೆಯಲ್ಲವೇ? ಅವರ ಮೂಲಕ ಇಸ್ಲಾಮನ್ನು ಪೂರ್ತಿಗೊಳಿಸಲಾಯಿತು. ಸರ್ವಶಕ್ತನಿಗೆ ಹೇಗೆ ತಮ್ಮನ್ನು ಸಮರ್ಪಿಸುವುದೆನ್ನುವುದನ್ನು ಪ್ರಾಯೋಗಿಕವಾಗಿ ತೋರಿಸಿಕೊಟ್ಟವರಾಗಿದ್ದಾರೆ ಅವರು. ಪ್ರಾರಂಭದಲ್ಲೇ ಸೂಚಿಸಿರುವಂತೆ ಅವರ ಜೀವನದ ಸಣ್ಣ-ಪುಟ್ಟ ಎಲ್ಲಾ ಪ್ರವರ್ತನೆಗಳೂ ದಾಖಲಿಸಲ್ಪಟ್ಟಿದೆ. ಅದು ಭೂಮಿಯಲ್ಲಿ ಜನಿಸಿ ಬರುವ ಅಂತಿಮ ಮಾನವನ ತನಕ ಸಕಲ ಮನುಷ್ಯರಿಗೂ ಆದರ್ಶವೂ ಅನುಕರಣೀಯವೂ ಆಗಿರುತ್ತದೆ. ಪ್ರೀತಿ ತುಂಬಿ ತುಳುಕುತ್ತಿದ್ದ ಸಾಧಾರಣ ಮನುಷ್ಯ, ಸತ್ಯಸಂಧನಾದ ವ್ಯಾಪಾರಸ್ಥ, ದಯಾಳುವಾದ ಸಮಾಜ ಸೇವಕ, ಪರೋಪಕಾರಿಯಾದ ಸಹಪಾಠಿ, ಕರುಣಾಳುವಾದ ಪತಿ, ವಾತ್ಸಲ್ಯ ನಿಧಿಯಾದ ಪಿತ, ಕೆಡುಕನ್ನು ಕಠಿಣವಾಗಿ ವಿರೋಧಿಸುವ ಅಂದರೆ ಕೆಡುಕು ಪ್ರವರ್ತಿಸುವವರನ್ನು ಅದರಿಂದ ಬೇರ್ಪಡಿಸಲು ಪರಿಶ್ರಮಿಸುವ ಸುಧಾರಕ. ನ್ಯಾಯವಂತನಾದ ಆಡಳಿತಗಾರ. ಹೀಗೆ ಜೀವನದ ಎಲ್ಲಾ ರಂಗಗಳಲ್ಲೂ ಒಬ್ಬ ಮನುಷ್ಯನು ಹೇಗಿರಬೇಕು ಎಂದು ಕಲಿಸಿಕೊಟ್ಟವರಾಗಿದ್ದಾರೆ ಪ್ರವಾದಿ(ಸ)ಗಳು. ದೇವನಿಗೆ ಸರ್ವಸ್ವವನ್ನೂ ಸಮರ್ಪಿಸಿಕೊಂಡು ಹೇಗೆ ಮನುಷ್ಯನು ಔನ್ನತ್ಯವನ್ನು ಸಾದಿಸಿಕೊಳ್ಳಬಹುದೆನ್ನುವುದನ್ನು ಅವರು ನಮಗೆ ತೋರಿಸಿಕೊಟ್ಟರು. ಸ್ವಂತ ಆದರ್ಶದ ಪ್ರತೀಕವಾಗಿ ನಿಂತು ಲಕ್ಷಾಂತರ ಜನರನ್ನೂ ಮಾದರೀ ಯೋಗ್ಯರನ್ನಾಗಿ ಮಾಡಿ ಒಂದು ಸ್ವಸ್ಥ-ಸಂಪನ್ನ-ಮಾದರೀ ಯೋಗ್ಯ ಸಮುದಾಯವನ್ನೂ ಸೃಷ್ಟಿಸಲು ಅವರಿಗೆ ಸಾಧ್ಯವಾಯಿತೆನ್ನುವುದೇ ಮುಹಮ್ಮದ್(ಸ)ರವರನ್ನು ಇತರ ಹಲವು ಕ್ರಾಂತಿಕಾರಿಗಳಿಂದ ಪ್ರತ್ಯೇಕಿಸಿ ನಿಲ್ಲಿಸುವ ಅಂಶವಾಗಿದೆ.

ಯಾವುದೇ ಒಂದು ಆಶಯ-ಆದರ್ಶವು ಸಂಪೂರ್ಣ ಪರಿವರ್ತನೆಗೆ ಯೋಗ್ಯವೆನಿಸುವುದು ಅದರ ಸಿದ್ಧಾಂತಗಳು ಸತ್ಯವೂ-ಸ್ಪಷ್ಟವೂ-ವೈರುಧ್ಯ ರಹಿತವೂ ಆಗಿದ್ದು ಪ್ರಾಯೋಗಿಕವಾಗಿದ್ದಾಗ ಮಾತ್ರ. ಸುಂದರವಾದ ತತ್ವಗಳನ್ನು ಹೇಳುವುದು ಸುಲಭ ಆದರೆ ಅದನ್ನು ಪ್ರಾಯೋಗಿಕಗೊಳಿಸುವುದು. ಅದರಲ್ಲಿ ವೈರುಧ್ಯತೆಗಳಿಲ್ಲದಂತೆ ಮಾಡುವುದು ಕಷ್ಟವಾದ ಕಾರ್ಯವಾಗಿದೆ. ಇಸ್ಲಾಮಿನ ಸಿದ್ಧಾಂತಗಳನ್ನು ಕೆಲವು ಸಾಂಕೇತಿಕ ಶಬ್ದಗಳಿಂದ ಸೂಚಿಸಲಾಗುತ್ತದೆ. ತೌಹೀದ್, ರಿಸಾಲತ್ ಆಖಿರತ್ ಇತ್ಯಾದಿಗಳಾಗಿವೆ ಅವು. ತೌಹೀದ್ ಅಂದರೆ, ದೇವನ ಅಸ್ತಿತ್ವನ್ನೂ, ಅವನ ಏಕತೆಯನ್ನೂ, ಆರಾಧನೆಗೆ ಅರ್ಹನು ಅವನು ಮಾತ್ರವೆಂದೂ ತಿಳಿಯುವುದಾಗಿದೆ. ರಿಸಾಲತ್ ಎನ್ನುವ ಪದವು ಪ್ರತಿನಿದೀಕರಿಸುವುದು ಏಕದೇವ ವಿಶ್ವಾಸ ಮತ್ತು ಆರಾಧನೆಯ ಅವಶ್ಯಕತೆಯನ್ನು ವಿವರಿಸಿ ಹೇಳುವ

ದೈವಿಕ ಮಾರ್ಗದರ್ಶನವನ್ನಾಗಿದೆ. ಹಾಗೆ ಮರಣ ನಂತರದ ಜೀವನವಾಗಿದೆ `ಆಖಿರತ್'ನಲ್ಲಿ ಅಡಕವಾಗಿರುವ ಸಂಗತಿ.

## ಏಕದೇವ ವಿಶ್ವಾಸ :

ಈ ಪ್ರಪಂಚದಲ್ಲಿರುವ ಪ್ರತೀ ವಸ್ತುವೂ ಅದರಾಚೆಗಿರುವ ಒಂದು ಲೋಕವನ್ನು ನಿರೀಕ್ಷಿಸುತ್ತದೆ. ಪರಮಾಣುವಿನಿಂದ ನಕ್ಷತ್ರ ರಾಶಿಗಳ ತನಕ ಹಿರಿಯ ಮತ್ತು ಕಿರಿಯ ವಸ್ತುಗಳಲ್ಲಿ ಯಾವುದೂ ಇದಕ್ಕೆ ಹೊರತಾಗಿಲ್ಲ. ಒಂದೊಂದು ವಸ್ತುವಿನ ಮೂಲವನ್ನು ಅನ್ವೇಷಿಸುವಾಗಲೂ ಅದು ಇನ್ನೊಂದು ಮೂಲವನ್ನು ಅನ್ವೇಶಿಸಿಕೊಂಡಿರುವುದು ಕಾಣಲು ಸಾಧ್ಯವಾಗುತ್ತದೆ. ಪ್ರಾಪಂಚಿಕ ವಸ್ತುಗಳ ಮೂಲವನ್ನು ಅರಿತುಕೊಳ್ಳುವ ನಮ್ಮ ಅನ್ವೇಷಣೆಯು ಸರಾಗವಾಗಿ ಮುಂದುವರಿಯದೆ ಕೊನೆಗೆ ಮೂಲವಿಲ್ಲದ ಒಂದು ಕೇಂದ್ರದಲ್ಲಿ ತಲುಪಿ ಬಿಡುತ್ತದೆ. ಅದಾಗಿದೆ ಎಲ್ಲಾ ಅನ್ವೇಷಣೆಗಳ ಅಂತ್ಯಬಿಂದು. ಪ್ರಪಂಚದ ಪ್ರತೀ ಒಂದು ವಸ್ತುವಿಗೂ ಮೂಲವಸ್ತುವಿರುವುದನ್ನು ನಾವು ಕಾಣುತ್ತೇವೆ. ಆದ್ದರಿಂದ ಮೂಲವಸ್ತುವೇ ಇಲ್ಲದ ಪರಾಶಕ್ತಿಅದು ಪ್ರಪಂಚದ ಹೊರಗಿರುವುದಾಗಿರಲೇ ಬೇಕು. ಅದು ಊಹಾತೀತವೂ ಆಗಿರಬೇಕು. ಪ್ರಪಂಚದ ಸಣ್ಣ ಮತ್ತು ದೊಡ್ಡ ಎಲ್ಲಾ ವಸ್ತುಗಳ ಸೃಷ್ಠಿಯ ಮೂಲವನ್ನಾಗಿದೆ ಇಸ್ಲಾಮ್ `ಅಲ್ಲಾಹು' ಎಂದು ಹೇಳುವುದು.

ಅಲ್ಲಾಹು ಕೇವಲ ಒಂದು ಶಕ್ತಿಯೆಂದೊ, ಚಾಲನೆ ಇಲ್ಲದ ಒಂದು ಪ್ರಕಾಶವೆಂದೂ ಇಸ್ಲಾಮ್ ಕಲಿಸುವುದಲ್ಲ' ಮನುಷ್ಯನಿಗೆ ಕಾಣುವ ಮತ್ತು ಅವನು ಸ್ಪರ್ಶಿಸುವ ವಿಷಯಗಳನ್ನಷ್ಟೇ ವಿಷಧೀಕರಿಸಲು ಸಾಧ್ಯ. ಆದ್ದರಿಂದ ಕಾಣುವ, ಕೇಳುವ, ಸ್ಪರ್ಶಿಸುವ ಸಾಧ್ಯತೆ ಇಲ್ಲದ ದೇವನ ಸತ್ತೆಯು ಮನುಷ್ಯನ ವಿಷಧೀಕರಣಕ್ಕೆ ಅತೀತವಾಗಿದೆ. ಅಲ್ಲಾಹು ಸ್ವಯಂ ವ್ಯಕ್ತಪಡಿಸಿರುವ ರೀತಿ ಮತ್ತು ವಿಧಾನಗಳಿಂದ ಮಾತ್ರ ನಮಗೆ ಅವನ ಅಸ್ತಿತ್ವವನ್ನು ಅರಿಯಲು ಸಾಧ್ಯ. ಪರಮೋಚ್ಛವು ಅತ್ಯುನ್ನತವು ಆದ ಸತ್ತೆಯಾಗಿದೆ ಅಲ್ಲಾಹನೆನ್ನುವುದನ್ನು ಪರಿಶುದ್ಧ ಕುರ್‌ಆನ್ ಕಲಿಸಿಕೊಡುತ್ತದೆ. ಅವನು ಅತುಲ್ಯನೂ ಅದ್ವಿತೀಯನೂ ಆಗಿರುವನು. ಅಜೇಯನೂ ಪರಿಪೂರ್ಣನೂ ಆಗಿದ್ದಾನೆ. ಸರ್ವಕಾಲ ಜ್ಞಾನಿಯೂ ಆಶ್ರಯದಾತನೂ-ನಿರಾವಲಂಬಿಯೂ ಆಗಿರುವನು. ಪರಮ ಕಾರುಣ್ಯವಂತನೂ ದಯಾ ಸಾಗರನೂ ಆಗಿರುವನು. ಸುಗುಣನೂ, ಸಂಪೂರ್ಣನೂ, ಸರ್ವೋನ್ನತನೂ, ಸರ್ವಲೋಕಗಳ ಸೃಷ್ಠಿಕರ್ತನೂ ಆಗಿದ್ದಾನೆ. ಅಲ್ಲಾಹನ ಕುರಿತು ಪ್ರತಿವಾದಿಸುವ ಒಂದು ಕುರ್‌ಆನ್ ವಚನವನ್ನು ನೋಡಿರಿ.

**"ಅಲ್ಲಾಹ್ ಚಿರಂತನನು, ಸ್ವಯಂ ಜೀವಂತನು, ಅಖಿಲ ಪ್ರಪಂಚದ ನಿಯಂತ್ರಕನಾದ ಆತನ ಹೊರತು ಆರಾಧ್ಯರಾರೂ ಇಲ್ಲ. ಅವನಿಗೆ ತೂಕಡಿಕೆಯಾಗಲೀ ನಿದ್ರೆಯಾಗಲೀ ಬಾಧಿಸುವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಆತನದೇ, ದಾಸರ ಮುಂದಿರುವುದನ್ನು ಆತನು ಬಲ್ಲನು. ಅವರಿಂದ ಮರೆಯಾಗಿರುವುದನ್ನೂ ಆತನು ಬಲ್ಲನು. ಆತನು ಸ್ವತಃ ತಿಳಿಯಗೊಡಿಸುವ ಹೊರತು ಆತನ ಜ್ಞಾನ ಭಂಡಾರದಿಂದ ಯಾವ ವಿಷಯವನ್ನೂ ಅವರು ತಿಳಿಯಲಾರರು. ಅವನ ಅಧಿಕಾರವು ಆಕಾಶಗಳನ್ನೂ, ಭೂಮಿಯನ್ನು ವ್ಯಾಪಿಸಿದೆ. ಅವುಗಳ ಸಂರಕ್ಷಣೆಯು ಆತನಿಗೆ ಧಣಿಯುವಂತಹಾ ಕಾರ್ಯವಲ್ಲ. ಅವನು ಏಕೈಕ ಮಹೋನ್ನತನೂ ಸರ್ವಶ್ರೇಷ್ಟನೂ ಆಗಿರುತ್ತಾನೆ"**(2-255)

ಸೂಕ್ಷ್ಮಾತಿ ಸೂಕ್ಷ್ಮವೂ, ಸ್ಥೂಲವೂ ಆದ ಸಕಲ ವಸ್ತುಗಳ ಸೃಷ್ಟಿಕರ್ತನೂ, ಸಂರಕ್ಷಕನೂ, ಪರಿಪಾಲಕನೂ, ಸರ್ವಶಕ್ತನೂ, ಸರ್ವಜ್ಞನೂ ಆದವನಾಗಿದ್ದಾನೆ ಅಲ್ಲಾಹು. ಇದು ಒಂದು ಕುಲದೇವರ ಅಥವಾ ಒಂದು ಗೋತ್ರದವರ ದೇವರ ಹೆಸರಲ್ಲ. ಎಲ್ಲಾ ದೇಶದವರ, ಎಲ್ಲಾ ಭಾಷೆಯವರ, ಎಲ್ಲಾ ವರ್ಗ-ಗೋತ್ರ-ಕುಲದವರ ಯಥಾರ್ಥವಾದ ದೇವರ ಹೆಸರಾಗಿದೆ ಅಲ್ಲಾಹು. ಸೃಷ್ಟಿಕರ್ತನೂ-ಸಂರಕ್ಷಕನೂ ಆದ ದೇವನನ್ನು ವ್ಯತ್ಯಸ್ಥ ಭಾಷೆಗಳಲ್ಲಿ, ವ್ಯತ್ಯಸ್ಥ ಹೆಸರುಗಳಿಂದ ಕರೆಯಲಾಗುತ್ತಿರುವುದನ್ನು ಕಾಣುತ್ತೇವೆ. ಸಂಸ್ಕೃತದಲ್ಲಿ "ಪರಬ್ರಹ್ಮಂ" "ಪರಮಾತ್ಮ" ಮುಂತಾದ ಹೆಸರಿನಿಂದ ಸರ್ವಶಕ್ತನನ್ನು ಸಂಬೋಧಿಸಲಾಗುವುದನ್ನು ಉಪನಿಷತ್‌ಗಳ ಪರಮಾರ್ಶೆಗಳನ್ನು ಓದಿದರೆ ವ್ಯಕ್ತವಾಗುತ್ತದೆ. ಬೈಬಲಿನ ಹಳೆಯ ಒಡಂಬಡಿಕೆಯಲ್ಲಿ ಯಹೋವ, ಯಾಹ್, ಅಡೋನಾಯಿ, ಏಲ್, ಏಲ್ಯೋನ್, ಏಲ್‌ಶದ್ದಾಯಿ, ಏಲ್, ಎಲೋಹಿಂ ಮುಂತಾದ ಹೆಸರುಗಳಿಂದ ಏಕದೇವನನ್ನು ಸಂಬೋಧಿಸಲಾಗುವುದನ್ನು ಕಾಣಬಹುದಾಗಿದೆ. ಏಸು 'ಎಲೋಹಿ' ಎಂದು ದೇವನನ್ನು ಸಂಬೋಧಿಸಿದ್ದೆಂದು ಬೈಬಲಿನ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸರ್ವಶಕ್ತನಾದ ದೇವನನ್ನು ಕರೆಯಲು ಕುರ್‌ಆನ್ ಉಪಯೋಗಿಸಿದ ಹೆಸರು 'ಅಲ್ಲಾಹು' ಎಂದಾಗಿದೆ. ಸಕಲ ವಿದದ ಆರಾಧನೆಗಳಿಗೆ ಯತಾರ್ಥವಾಗಿ ಅರ್ಹಪಟ್ಟವನು ಎಂದಾಗಿದೆ. 'ಅಲ್ಲಾಹು' ಎನ್ನುವ ಪದದ ತಾತ್ಪರ್ಯ. ಯಾವುದಾದರೊಂದು ಪ್ರತ್ಯೇಕ ವಿಭಾಗದ ದೇವನೆಂಬ ನೆಲೆಯಲ್ಲಲ್ಲ. 'ಯತಾರ್ಥವಾದ ದೇವ' ಎಂಬ ನೆಲೆಯಲ್ಲಾಗಿದೆ ಅಲ್ಲಾಹು ಎಂಬ ಪದ ಪ್ರಯೋಗಿಸಲಾಗಿರುವುದು.

ಪ್ರಪಂಚದ ನಿದರ್ಶನಗಳನ್ನು ತೋರ್ಪಡಿಸಿಕೊಂಡು ಕುರ್‌ಆನ್ ಸೃಷ್ಟಿಕರ್ತನ ಅಸ್ತಿತ್ವವನ್ನು ಪ್ರತಿಪಾದಿಸುತ್ತದೆ. ಉದಾಹರಣೆಗೆ ನೋಡಿ,

**"ಇವರು ನಂಬುವುದಿಲ್ಲವೆಂದಾದರೆ" ಒಂಟೆಗಳು ಹೇಗೆ ಸೃಷ್ಟಿಸಲ್ಪಟ್ಟಿವೆ ಎಂಬುದನ್ನು ನೋಡುವುದಿಲ್ಲವೇ? ಆಕಾಶವು ಹೇಗೆ ಎತ್ತರಿಸಲ್ಪಟ್ಟಿದೆಯೆಂಬುದನ್ನು ನೋಡುವುದಿಲ್ಲವೇ? ಪರ್ವತಗಳು ಹೇಗೆ ನಾಟಲ್ಪಟ್ಟಿವೆ ಎಂಬುದನ್ನು ನೋಡುವುದಿಲ್ಲವೇ? ನೆಲವನ್ನು ಹೇಗೆ ಹಾಸಲಾಗಿದೆ ಯೆಂಬುದನ್ನು ನೋಡುವುದಿಲ್ಲವೇ?** (88/17-20)

ತನ್ನ ಸುತ್ತಮುತ್ತಲಿನಲ್ಲೊಮ್ಮೆ ಕಣ್ಣೋಡಿಸಿಕೊಂಡು ಪ್ರಪಂಚದ ಸಂಸ್ಥಾಪನೆಯ ಹಿಂದೆ ನೆಲೆಗೊಂಡಿರುವ ಮಹಾಚೈತನ್ಯದ ಕುರಿತು ಮನವರಿಕೆ ಮಾಡಿಕೊಳ್ಳಬೇಕೆಂದು ಕುರ್‌ಆನ್ ಮನುಷ್ಯನೊಂದಿಗೆ ಸೂಚಿಸುತ್ತದೆ. ಅದೇ ರೀತಿಯಲ್ಲಿ ಪ್ರಕೃತಿಯ ವಿಸ್ಮಯಗಳ ಕುರಿತು ಉಲ್ಲೇಖಿಸಿಕೊಂಡು ಬಹುದೈವ ವಿಶ್ವಾಸದ ನಿರರ್ತಕತೆಯ ಕುರಿತು ಕುರ್‌ಆನ್ ಸೂಚಿಸುವುದು ನೋಡಿರಿ. **"ಅಲ್ಲಾಹನು ಯಾರನ್ನೂ ತನ್ನ ಮಕ್ಕಳನ್ನಾಗಿ ಮಾಡಿಲ್ಲ. ಅವನ ಜೊತೆ ಇನ್ನೊಬ್ಬ ದೇವನಿಲ್ಲ. ಹಾಗಿರುತ್ತಿದ್ದರೆ ಪ್ರತಿಯೊಬ್ಬ ದೇವನೂ ತನ್ನ ಸೃಷ್ಟಿಯನ್ನು ತೆಗೆದುಕೊಂಡು ಬೇರೆ ಹೋಗಿ ಬಿಡುತ್ತಿದ್ದನು. ಆ ಬಳಿಕ ಅವರು ಒಬ್ಬರ ಮೇಲೆ ಇನ್ನೊಬ್ಬರು ಆಕ್ರಮಣ ನಡೆಸುತ್ತಿದ್ದರು. ಅವರು ಆಡುವ ಮಾತುಗಳಿಂದೆಲ್ಲಾ ಅಲ್ಲಾಹ್ ಪರಿಶುದ್ಧನಾಗಿದ್ದಾನೆ"**(23-91)

ಒಂದು ವಸ್ತುವಿನ ಅತ್ಯಂತ ಸಣ್ಣ ಕಣದ ಒಳಗಿನ ಇಲೆಕ್ಟ್ರೋನ್‌ಗಳು, ಪ್ರೋಟಾನುಗಳು, ನ್ಯೂಟ್ರಾನ್‌ಗಳು, ಮೀಸೋನುಗಳು, ಪೊಸಿಟ್ರೋನುಗಳ ಮಧ್ಯೆ ಇರುವ ಪರಸ್ಪರ ಹೊಂದಾಣಿಕೆಯು ವಿಸ್ಮಯವಾಗಿದೆ. ಸ್ಥೂಲ ಪ್ರಪಂಚದ ವಿಷಯದಲ್ಲೂ ಇದೇ ಸ್ಥಿತಿಯಾಗಿದೆ ಕಂಡು ಬರುವುದು.

ಪ್ರಪಂಚದ ವ್ಯವಸ್ಥಾಪನೆಯಲ್ಲೆಲ್ಲಾ ಕಂಡು ಬರುವ ಏಕರೂಪವು ಅದನ್ನೆಲ್ಲಾ ಸೃಷ್ಟಿಸಿದ್ದು ಒಂದೇ ಸೃಷ್ಟಿಕರ್ತನೆನ್ನುವುದನ್ನು ಒತ್ತಿ ಹೇಳುತ್ತದೆ. ಒಂದೊಮ್ಮೆ ಈ ಪ್ರಪಂಚವನ್ನು ಸಂಸ್ಥಾಪಿಸಿದ್ದು ಬೇರೆ ಬೇರೆ ದೇವರುಗಳಾಗಿದ್ದರೆ ಸೃಷ್ಟಿಯ ಬೇರೆ ಬೇರೆ ಪ್ರತಿಭಾಸಗಳ ಹಿಂದೆ ಒಂದೇ ರೀತಿಯ ಕಾರ್ಯಕ್ಷಮತೆ ಕಂಡುಬರುವುದು ಹೇಗೆ? ಮನುಷ್ಯ ಶರೀರದ ಒಂದೊಂದು ಅಂಗವೂ ಪರಸ್ಪರ ಹೊಂದಾಣಿಕೆಯಿಂದ ಕೆಲಸ ನಿರ್ವಹಿಸುತ್ತದೆ ಮತ್ತು ಒಂದನ್ನೊಂದು ಅವಲಂಬಿಸಿಕೊಂಡಿರುತ್ತದೆ. ಜಂತುಗಳು ಮತ್ತು ಸಸ್ಯಗಳು ಕೂಡಾ ಅಸ್ತಿತ್ವಕ್ಕಾಗಿ ಪರಸ್ಪರ ಆಶ್ರಯಿಸಿಕೊಂಡಿರುತ್ತದೆ. ಜಂತುಗಳಿಲ್ಲದಿದ್ದರೆ ಸಸ್ಯಗಳೊ, ಸಸ್ಯಗಳಿಲ್ಲದಿದ್ದರೆ ಜಂತುಗಳೊ ನೆಲೆನಿಲ್ಲಲಾರದಂತಹಾ ರೀತಿಯಲ್ಲಿ ಭೂಮಿಯನ್ನು ಸಂಸ್ಥಾಪಿಸಲಾಗಿದೆ. ಅದೇ ಪ್ರಕಾರ ಸಸ್ಯಗಳು ಮತ್ತು ಜಂತುಗಳು ಪರಸ್ಪರ ತಮ್ಮ ಅಸ್ಥಿತ್ವಕ್ಕಾಗಿ ಆಶ್ರಯಿಸಿಕೊಳ್ಳುವುದನ್ನು ನಾವು ಕಾಣಬಹುದಾಗಿದೆ. ಒಂದೊಂದು ಜೀವಿಗಳಿಗೂ ಬೇರೆ ಬೇರೆ ಸೃಷ್ಟಿಕರ್ತನಿರುತ್ತಿದ್ದರೆ ಜೀವಿಗಳ ಮಧ್ಯೆ ಈ ರೀತಿಯ ಬಂಧವು ನೆಲೆಗೊಳ್ಳುತ್ತಿರಲಿಲ್ಲ. ಸಸ್ಯಗಳ ಸೃಷ್ಟಿಕರ್ತನೂ ಜಂತುಗಳ ಸೃಷ್ಟಿಕರ್ತನೂ ಅವರವರು ಇಚ್ಛಿಸುವ ರೀತಿಯಲ್ಲಿ ಅವುಗಳನ್ನು ನಿಯಂತ್ರಿಸುತ್ತಿದ್ದರೆ ಈ ಎರಡು ವಿಭಾಗವು ನೆಲೆ ನಿಲ್ಲುತ್ತಿರಲಿಲ್ಲ. ಸಂಕ್ಷಿಪ್ತವಾಗಿ ಹೇಳುವುದಾದರೆ, ಆಕಾಶ-ಭೂಮಿಗಳಿಗೆ ಒಂದೇ ಸೃಷ್ಟಿಕರ್ತನಿರುವುದೆಂಬ ವಾಸ್ತವಿಕತೆಗೆ ನಮ್ಮ ಸುತ್ತ-ಮುತ್ತಲಿನಲ್ಲೇ ಧಾರಾಳ ಸಾಕ್ಷ್ಯಾಧಾರಗಳು ದೊರೆಯುತ್ತದೆ. ಪವಿತ್ರ ಕುರ್‌ಆನ್ ಹೇಳುತ್ತದೆ.

**"ಭೂಮಿ-ಆಕಾಶಗಳಲ್ಲಿ ಏಕೈಕ ಅಲ್ಲಾಹನ ಹೊರತು ಇತರ ದೇವರುಗಳೂ ಇರುತ್ತಿದ್ದರೆ (ಭೂಮಿ ಮತ್ತು ಆಕಾಶ) ಇವೆರಡರ ವ್ಯವಸ್ಥೆಯೂ ಕೆಟ್ಟು ಹೋಗುತ್ತಿತ್ತು. ಆದುದರಿಂದ ವಿಶ್ವ ಸಿಂಹಾಸನದ ಪ್ರಭುವಾಗಿರುವ ಅಲ್ಲಾಹ್ ಅವರು ಹೊರಿಸುವ ಆರೋಪಗಳಿಂದ ಪರಿಶುದ್ಧನಾಗಿರುತ್ತಾನೆ"**

(21-22)

ಸೃಷ್ಟಿಕರ್ತನೂ, ಸಂರಕ್ಷಕನೂ, ಪರಿಪಾಲಕನೂ ಆದ ಅಲ್ಲಾಹನು ಏಕನು ಎಂಬ ತತ್ವವನ್ನಾಗಿದೆ ಪ್ರವಾದಿಗಳೆಲ್ಲರೂ ಪ್ರಥಮವಾಗಿಯೂ ಪ್ರಧಾನವಾಗಿಯೂ ಪ್ರತಿಪಾದಿಸಿರುವುದು. ಆದುದರಿಂದಲೇ ಧಾರ್ಮಿಕ ಗ್ರಂಥಗಳೆಲ್ಲವೂ ಏಕದೇವಾರಾಧನೆಯ ಕಡೆಗೆ ಬೆಳಕು ಚೆಲ್ಲುತ್ತದೆ. ಹಲವು ವಿಧದ ದೇವರುಗಳನ್ನು ಸಂಕಲ್ಪಿಸಿಕೊಂಡಿರುವ ಧರ್ಮಗಳ ಗ್ರಂಥಗಳಲ್ಲಿ ಕೂಡಾ ಅಂದಿನ ಜನರು ಸೃಷ್ಟಿಕರ್ತನು, ಸಂರಕ್ಷಕನೂ ಆದ ಏಕದೇವನನ್ನೇ ಸಂಕಲ್ಪಿಸಿಕೊಂಡಿದ್ದರು ಎನ್ನುವುದನ್ನು ಮನವರಿಕೆ ಮಾಡಿಕೊಳ್ಳಬಹುದಾಗಿದೆ. ಇದರಿಂದ ಆ ಧರ್ಮಗಳ ಸಮುದಾಯಗಳ ಕಡೆಗೆ ಆಗತರಾದ ಪ್ರವಾದಿಗಳೆಲ್ಲರೂ ಏಕದೇವ ಸಿದ್ಧಾಂತವನ್ನು ಪ್ರಚರಿಸಿದ್ದರೆನ್ನುವುದು ದೃಢವಾಗುತ್ತದೆ. ತದನಂತರ ಆ ಸಮೂಹವು ಬಹುದೇವ ವಿಶ್ವಾಸಗಳೆಡೆಗೆ ಸರಿದವು ಎನ್ನುವುದನ್ನು ಊಹಿಸಬಹುದಾಗಿದೆ.

## ಹಿಂದೂ ಧರ್ಮದ ಅಂಗೀಕೃತ ಗ್ರಂಥಗಳಲ್ಲಿ ಏಕದೇವ ವಿಶ್ವಾಸ

ಹಿಂದೂ ಧರ್ಮದ ಆಧಾರ-ಪ್ರಮಾಣಗಳಲ್ಲಿ ಅತ್ಯಂತ ಉನ್ನತ ಸ್ಥಾನದಲ್ಲಿರುವ ವೇದಗಳನ್ನು ನೋಡೋಣ. ಋಗ್ವೇದದಲ್ಲಿ ದೇವರುಗಳ ಸಂಖ್ಯೆ ಮುನ್ನೂರ ಹದಿಮೂರರ ತನಕ ಬೆಳೆಯುತ್ತದೆ. ಅವರಲ್ಲಿ ಪ್ರಮುಖರಾದ ಇಂದ್ರ, ಮಿತ್ರ, ವರುಣ, ಅಗ್ನಿ, ವಿಷ್ಣು ಮುಂತಾದವರು ಒಂದೊಂದು ಪ್ರಮುಖ ಕಾರ್ಯಗಳ ಹೊಣೆ ನಿರ್ವಹಿಸುತ್ತಿದ್ದಾರೆಂಬ ಉಲ್ಲೇಖವಿರುವುದನ್ನು ಕಾಣಬಹುದಾಗಿದೆ.

ಆದರೆ, ಒಂದು ಕಡೆ ದೇವರುಗಳಿಗೆ ಹೊಣೆಗಾರಿಕೆಯನ್ನು ವಿಂಗಡಿಸಿಕೊಡುವ ವೇದಗಳೇ ಇನ್ನೊಂದು ಕಡೆ ಸರ್ವ ಚರಾಚರಗಳ ಒಡೆಯನಾದ ಏಕದೇವನ ಕುರಿತು ಕೂಡಾ ಪ್ರಖ್ಯಾಪಿಸುತ್ತದೆ. ಹಿರಣ್ಯಗರ್ಭ, ವಿಶ್ವಕರ್ಮ, ಪ್ರಜಾಪತಿ ಮುಂತಾದ ಹೆಸರುಗಳಿಂದ ವೇದಗಳಲ್ಲಿ ಏಕದೇವನನ್ನು ಸಂಬೋಧಿಸಲಾಗಿದೆ. ಋಗ್ವೇದದ ಒಂದು ಶ್ಲೋಕ ನೋಡಿ,

**"ಪ್ರಾರಂಭದಲ್ಲಿ ಹಿರಣ್ಯ ಗರ್ಭನ ಅಸ್ತಿತ್ವವಷ್ಟೇ ಇತ್ತು. ಸಕಲ ವಸ್ತುಗಳಿಗೆ ಸೃಷ್ಟಿಕರ್ತನು ಅವನು. ಭೂಮಿಯನ್ನು ಸ್ವರ್ಗವನ್ನು ಆಯಾ ಸ್ಥಾನದಲ್ಲಿ ನೆಲೆಗೊಳಿಸಿದ್ದು ಅವನೇ. ಅವನಿಂದಲೇ ಸರ್ವ ಚರಾಚರಗಳೂ ಜೀವ ತಾಳಿತು. ಅದೆಲ್ಲವೂ ಅವನ ಕಲ್ಪನೆಗಳನ್ನು ಪಾಲಿಸುತ್ತಿದೆ. ಆದ್ದರಿಂದ ಅವನಿಗಷ್ಟೇ ಪೂಜೆಯನ್ನು ಅರ್ಪಿಸಿರಿ.** (ಋಗ್ವೇದ 10 : 121:1)

ಇದೇ ಆಶಯವನ್ನು ಪ್ರತಿಪಾದಿಸುವ ಶ್ಲೋಕಗಳನ್ನು ಇತರ ವೇದಗ್ರಂಥಗಳಲ್ಲೂ ಕಾಣಬಹುದಾಗಿದೆ. ವೇದಗಳು ಮುಖ್ಯವಾಗಿ ಆರ್ಯರ ಕರ್ಮ ವಿಧಾನಗಳನ್ನಾಗಿದೆ ವಿವರಿಸುವುದು. ಉಪನಿಷತ್ತುಗಳು ಅವರ ವಿಶ್ವಾಸ ಮತ್ತು ತತ್ವಗಳನ್ನು ವಿವರಿಸುತ್ತದೆ. ಇಂದು ನಾವು ಸುಮಾರು 108 ಉಪನಿಷತ್ತುಗಳನ್ನು ಕಂಡುಕೊಳ್ಳಬಹುದಾಗಿದ್ದು, ಅವುಗಳಲ್ಲಿ ಹೆಚ್ಚಿನವು ಬೇರೆ ಬೇರೆ ಶಕ್ತಿಗಳನ್ನು ದೇವರೆಂದು ಸಂಕಲ್ಪಿಸಿಕೊಂಡು ಅವರೊಂದಿಗೆ ಪ್ರಾರ್ಥಿಸುತ್ತಿರುವುದು ಕಂಡುಬರುತ್ತದೆ. ಆದರೆ ಬಹಳಷ್ಟು ಪ್ರಭಾವಶಾಲಿಯಾಗಿ ಏಕದೇವತ್ವವನ್ನು ಸಮರ್ಥಿಸುವ ಉಪನಿಷತ್ ಸೂಕ್ತಿಗಳು ಕೂಡಾ ಇದೆ.

ಭಾರತದಲ್ಲಿ ಪ್ರಬೋದನೆ ನಡೆಸಿದ ಪ್ರವಾದಿಗಳ ಸಂದೇಶದ ಪ್ರಭಾವಗಳು ಈ ಶ್ಲೋಕಗಳಲ್ಲಿ ಪ್ರತಿಬಿಂಬಿಸುವುದನ್ನು ನಾವು ಊಹಿಸಬಹುದಾಗಿದೆ. ನಾವೀಗ ಕೆಲವು ಉಪನಿಷತ್‌ನ ಸೂಕ್ತಿಗಳನ್ನು ನೋಡೋಣ.

ಯ ಏಕೋ ಜಾಲವಾನೀಶತ ಈಶ ನೀಭಿಃ
ಸರ್ವಾನ್ ಲೋಕಾನೀಶತ ಈಶ ನೀಭಿಃ
ಯ ಏವೈಕ ಉದ್ಭವೇ ಸಂಭವೇ ಚ
ಯ ಏಕದ್ವಿದುರ ಮೃತಾಸ್ತೇ ಭವಂತಿ

"ಯಾರು ತನ್ನ ವಿಶಿಷ್ಟ ಶಕ್ತಿ - ಸಾಮರ್ಥ್ಯಗಳಿಂದ ಸಕಲ ವಿಶ್ವಗಳನ್ನು ಅದರಲ್ಲಿರುವ ಸರ್ವ ಚರಾಚರಗಳನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವನೋ ಅವನು ಅದ್ವಿತೀಯನಾಗಿದ್ದಾನೆ. ತನ್ನ ಸ್ವಸಾಮರ್ಥ್ಯದಿಂದ ಸಮಸ್ತ ಲೋಕಗಳನ್ನು ಅದರಲ್ಲಿರುವ ಸರ್ವ ಜೀವಜಾಲಗಳನ್ನು ಸಂರಕ್ಷಿಸುವನು. ಸಮಸ್ತ ಜಗತ್ತಿನ ಹುಟ್ಟು ಮತ್ತು ವಿಸ್ತರಣೆಗೂ ಸಮರ್ಥನಾಗಿರುವ ಆ ಏಕನಾದ ಸೃಷ್ಟಿಕರ್ತನನ್ನು ತತ್ವಶಃ ಅರಿಯುವ ಮಹಾಪುರುಷರು ಅಮರರಾಗುವರು". (ಶ್ವೇತಾಶತರೋಪನಿಷತ್ 3 : 1)

ಅಪಾರಿಣಿ ಪಾದೊ ಜವನೋಗ್ರಹಿತಾ
ಪಾಶ್ಚಾತ್ಯ ಚಕ್ಷುಃ ಸಶ್ಯಾಣೋತ್ಯಕರ್ಣಃ

ಸವೇತ್ತಿ ವೈದ್ಯಂ ನಚ ತಸ್ಯಾಸ್ತಿ ವೇತ್ತಾ
ತಮೂಹರಶ್ಯಂ ಪುರುಷಂ ಮಹಾಂತಂ

"ಆ ಪರಮಾತ್ಮನಿಗೆ ಕರ -ಚರಣಗಳು (ನಮ್ಮ ಗ್ರಹಿಕೆಗೆ ನಿಲುಕುವ) ಇಲ್ಲದಿದ್ದರೂ ಸಮಸ್ತ ವಸ್ತುಗಳನು ಗ್ರಹಿಸುವವನೂ ಶರವೇಗದಲ್ಲಿ ಅವುಗಳನ್ನು ಸಮೀಪಿಸುವವನೂ, ಕಣ್ಣುಗಳಿಲ್ಲದೆ ಸರ್ವವನ್ನೂ ಕಾಣುವವನೂ, ಕಿವಿಗಳಿಲ್ಲದೆ ಎಲ್ಲವನ್ನೂ ಆಲಿಸುವವನು ಆಗಿದ್ದಾನೆ. ಅವನು ಎಲ್ಲವನ್ನೂ ಅರಿಯುತ್ತಾನೆ. ಆದರೆ ಅವನನ್ನು ಸಂಪೂರ್ಣವಾಗಿ ಅರಿತವರಿಲ್ಲ. ಜ್ಞಾನಿಗಳು ಅವನನ್ನು ಮಹಾನನೆಂದೂ ಆದಿ ಪುರುಷನೆಂದೂ ಹೇಳುತ್ತಾರೆ". (ಶ್ವೇತಶತರೋಪನಿಷತ್ 3:19)

ನ ತಸ್ಯ ಕಾರ್ಯ ಕಾರಣಂ ಚ ವಿದ್ಯತೇ
ನ ತಸ್ಯ ಸಮಸ್ಚಾ ಬ್ಯಾಧಿಕಶ್ಚ ದೃಶ್ಯತೇ
ಪರಾಸ್ಯ ಶಕ್ತಿರ್ ವಿವಿದ್ಯೆವ ಶ್ರೂಯತೇ
ಸ್ವಾಭಾವಿಕೇ ಜ್ಞಾನ ಬಲಕ್ರಿಯಾ ಚ ।

"ಆ ಪರಬ್ರಹ್ಮನಿಗೆ ಜೀವಿಗಳಂತಹಾ ಶರೀರವು -ಇಂದ್ರಿಯಗಳೂ ಇಲ್ಲ. ಅವನಿಗಿಂತ ಹಿರಿದಾದ ಅಥವಾ ಅವನನ್ನು ಹೋಲುವಂತಹಾ ಇನ್ಯಾವ ವಸ್ತುವೂ ಇಲ್ಲ. ಅವನ ಶಕ್ತಿ ಮತ್ತು ಯುಕ್ತಿಯ ವಿವಿಧ ರೀತಿಯಲ್ಲಿ ಪ್ರಕಟಗೊಳ್ಳುತ್ತಿರುತ್ತದೆ. ಅಷ್ಟೊಂದು ವಿಶಿಷ್ಟ ಶಕ್ತಿ ಮತ್ತು ಯುಕ್ತಿಗಳಾಗಿವೆ ಅವನದು". (ಶ್ವೇತ ಶತರೋಪನಿಷತ್ 6:4)

। ನ ತಸ್ಯ ಕಶ್ಚಿತ್ ಪತಿರ್ ಅಸ್ತಿಲೋಕೇ
ನ ಚೇಶಿತಾ ನೈವ ಚ ತಸ್ಯಲಿಂಗಂ
ನ ಕಾರಣಂ ಕರಣಾಧಿ ಪಾಧಿಪೋ
ನ ಚಾಸ್ಯ ಕಶ್ಚಿತ್ ಜನಿತಾ ನ ಚಾದಿಪಃ ।

"ಲೋಕದಲ್ಲಿ ಅವನಿಗೆ ಸರಿಸಾಟಿಯಾಗಿ ಯಾರೂ ಇಲ್ಲ. ಅವನಿಗೆ ಆಜ್ಞೆ ಅಥವಾ ಆದೇಶ ಕೊಡಬಲ್ಲವರಿಲ್ಲ. ಸರ್ವ ವಸ್ತುವಿನ ಉಪಸ್ಥಿತಿಗೂ ಕಾರಣಕರ್ತನಾದ ಅವನ ನೆಲೆಗೊಳ್ಳುವಿಕೆಗೆ ಕಾರಣ ಕರ್ತರಾರೂ ಇಲ್ಲ. ಅವನಿಗೆ ಪಿತೃನೂ ಇಲ್ಲ. ಅಧಿಪತಿಯೂ ಇಲ್ಲ".

(ಶ್ವೇತಶತರೋಪನಿಷತ್ 6 : 5)

। ನ ತತ್ರ ಸೂರ್ಯೋ ಭ್ರಾಂತಿ ನ ಚಂದ್ರ ತಾರಕಂ
ನೇಮಾ ವಿದ್ಯುತೋ ಬಾಂತಿ ಕುತ್ತೋಯ ಮಗ್ನಿಃ
ತಮೇವ ಭಾಂತಂ ಅನುಭಾತಿ ಸರ್ವಂ
ತಸ್ಯ ಭಾಸಾ ಸರ್ವಂ ಇದಂ ವಿಭಾತಿ ।

"ಅಲ್ಲಿ ಪರಬ್ರಹ್ಮನ ಮುಂದೆ ಸೂರ್ಯನೋ, ಚಂದ್ರನೋ, ನಕ್ಷತ್ರಗಳೋ ಪ್ರಕಾಶಿಸದು. ಮಿಂಚುಗಳು ಕೂಡಾ ಅವನ ಮುಂದೆ ಪ್ರಭಾ ಶೂನ್ಯವಾಗಿರುವುದು. ಹೀಗಿರಲು ಈ ಅಗ್ನಿ ಹೇಗೆ ತಾನೇ ಪ್ರಕಾಶಿಸೀತು? ಸ್ವಯಂ ಪ್ರಕಾಶವೇ ಆದ ಅವನ ಪ್ರಕಾಶದಿಂದಾಗಿದೆ ಎಲ್ಲವೂ ಪ್ರಕಾಶಿಸುವುದು. ಎಲ್ಲ ಪ್ರಶೋಭೆಗಳ ಹಿಂದೆ ಅವನ ಪ್ರಕಾಶವೇ ಇರುವುದಾಗಿದೆ". (ಮುಂಡಕೊಪನಿಷತ್ : 2, 2 : 11)

। ಅಶರೀರಂ ಶರೀರೇಶ್ವನ ವಸ್ಥೇಶ್ಯ ವಸ್ಥಿತಂ
ಮಹಾಂತಂ ವಿಭೂಮಾತ್ಮಾನಂ ಮತ್ವಾ ಧೀರೋ ನಶೋಚತಿ
ನಾಯಮಾತ್ಮಾ ಪ್ರವಚನೇನ ಲಭ್ಯೋ ನಮೇಧಯಾ ನಭಹುನಾಶ್ರುತೇನ

ಯಮೇ ವೃಷ ವೃಣುತೇ ತೇನ ಲಭ್ಯಂ ।

"ಆ ಪರಮಾತ್ಮನು (ಜ್ಞಾನವು) ಸರ್ವವ್ಯಾಪಿಯಾಗಿದ್ದಾನೆ. ಸುಸ್ಥಿರನೂ, ಸಶರೀರನಾದರೂ (ಊಹಿಸಲು ಅಸಾಧ್ಯ) ವಿದೇಹನು, ಅಚಂಚಲನೂ, ಮಹಾನನೂ ಆಗಿದ್ದಾನೆ. ಅವನ ಕುರಿತು ಅರಿತುಕೊಂಡವರಾರೂ ಶೋಖ ಬಾಧಿತರಾಗುವುದಿಲ್ಲ. ಅವನು ನಮ್ಮ ಇಂದ್ರಿಯಗಳಿಗೆ ನಿಲುಕದವನೂ ಆಗಿದ್ದಾನೆ. ಆದರೆ ಯಾರ ಮೇಲೆ ಅವನು ಕೃಪೆ ತೋರುವನೋ ಅವರು ಸೌಭಾಗ್ಯವಂತರೆನಿಸುವರು. ಅವನ ಕೃಪೆಗೆ ಪಾತ್ರರಾದವರಿಗೆ ಅವನ ಜ್ಞಾನವು ಲಭಿಸುವುದು".

(ಕಠೋಪನಿಷತ್ 1 : 2 : 22, 23)

## ಏಕದೇವ ವಿಶ್ವಾಸ ಬೈಬಲಿನ ಹಳೆಯ ಮತ್ತು ಹೊಸ ಒಡಂಬಡಿಕೆಗಳಲ್ಲಿ :

ಬೈಬಲಿನ ಹಳೆಯ ಒಡಂಬಡಿಕೆಗಳಲ್ಲಿ ಪ್ರವಾದಿಗಳು ಹೇಳಿರುವ ಮಾತು ಕೂಡಾ ಇದೇ ಆಗಿದೆ. ಸತ್ತೆ ಮತ್ತು ಗುಣಗಳಲ್ಲಿ ಏಕನೂ ಅದ್ವಿತೀಯನೂ ಆದ ಸೃಷ್ಟಿಕರ್ತನ ಅಸ್ತಿತ್ವದ ಕುರಿತಾಗಿದೆ. ಆಧಿಕಾಂಡದಿಂದ ಮುಲಾಕಿಯನು ತನಕದ ಮೂವತ್ತೊಂಬತ್ತು ಅಧ್ಯಾಯಗಳಲ್ಲೂ ಪ್ರಸ್ತಾಪಿಸಲ್ಪಟ್ಟಿರುವುದು. ಈ ಮಾತನ್ನು ಪುಷ್ಟೀಕರಿಸುವಂತಹಾ ಕೆಲವು ಸೂಕ್ತಗಳನ್ನು ನೋಡೋಣ.

**"ಸೃಷ್ಟಿಕರ್ತನು ಹೇಳುತ್ತಾನೆ ; ನಾನು ಸರ್ವಶಕ್ತನಾದ ದೇವರು. ನೀನು ನನ್ನನ್ನು ಅನುಸರಿಸುತ್ತಾ ನಡೆ".** (ಆದಿಕಾಂಡ 17 : 1)

**"ಸೃಷ್ಟಿಕರ್ತ ಅವನು ಕರುಣೆ ಮತ್ತು ದಯೆಯೇ ಮೈದಳೆದವನಾಗಿದ್ದಾನೆ. ಸಹನಾಮಯಿಯೂ ನಿಶ್ಚಲನೂ ಸುಸ್ಥಿರನೂ ಆಗಿದ್ದಾನೆ. ವಿಶ್ವಾಸಕ್ಕೆ ಅತ್ಯಂತ ಅರ್ಹನೂ ಅಸಂಖ್ಯಾತ ಸೃಷ್ಟಿಗಳೊಂದಿಗೆ ಅಚಂಚಲ ಪ್ರೀತಿ ಇಟ್ಟುಕೊಂಡವನೂ ಆಗಿದ್ದಾನೆ. ಅವನು ಅಧರ್ಮಿಗಳನ್ನು, ಅಕ್ರಮಿಗಳನ್ನು, ಪಾಪದಲ್ಲಿ ಮುಳುಗಿ ಹೋದವರನ್ನೂ ಕ್ಷಮಿಸಿಬಿಡುವಂತಹಾ ಕ್ಷಮಾ ಸಾಗರನಾಗಿದ್ದಾನೆ".**

(ವಿಮೋಚನಾ ಕಾಂಡ 34 : 6-7)

**"ಅವನು ನಿಮ್ಮ ತಂದೆಯಲ್ಲವೇ? ನಿನ್ನನ್ನು ಸೃಷ್ಟಿಸಿದವನು ಪರಿಪಾಲಿಸುತ್ತಿರುವ ನಿನ್ನ ಒಡೆಯನು".** (ಧರ್ಮೋಪದೇಶಕಾಂಡ 32:6)

**"ಆಕಾಶವು ದೇವನ ಮಹತ್ವವನ್ನು ಸಾರುತ್ತದೆ ; ಅದು ಅವನ, ಕೈ ಚಳಕವನ್ನು ಪ್ರಚುರಪಡಿಸುತ್ತದೆ".** (ಕೀರ್ತನೆಗಳು) (19:1)

**"ಇಸ್ರಾಯಿಲರೇ ಆಲಿಸಿರಿ, ನಮ್ಮನ್ನು ಸೃಷ್ಟಿಸಿದ ಸೃಷ್ಟಿಕರ್ತನು ಏಕನು ನಿನ್ನ ಸೃಷ್ಟಿಕರ್ತನಾದ ದೇವನನ್ನು ಹೃದಯಂಗಮಯವಾಗಿಯೂ, ಆತ್ಮಾರ್ಥವಾಗಿಯೂ ಸಂಪೂರ್ಣ ಶ್ರದ್ಧೆಯಿಂದ ಪ್ರೀತಿಸಿರಿ".** (ಧರ್ಮೋಪದೇಶಕಾಂಡ 6:4-5)

ಸೃಷ್ಟಿಕರ್ತನನ್ನೂ ಸ್ತುತಿಸಿರಿ. ಆಕಾಶ ಲೋಕದಲ್ಲಿ ಸೃಷ್ಟಿಕರ್ತನಿಗೆ ಸ್ತುತಿ ಸಲ್ಲುವುದು. ಮಹೋನ್ನತವಾದ ಸ್ಥರಗಳಲ್ಲೂ ಅವನಿಗೆ ಸ್ತುತಿ ಸಲ್ಲುವುದು.

ಅವನ ಸರ್ವ ಸೃಷ್ಟಿಗಳೂ ಅವನನ್ನು ಸ್ತುತಿಸುವರು.
ಅವನ ಸೇನಾನಿಗಳೆಲ್ಲರೂ ಅವನನ್ನು ಸ್ತುತಿಸುವರು.

ಸೂರ್ಯ-ಚಂದ್ರರೂ ಅವನನ್ನು ಸ್ತುತಿಸುವರು.
ಮಿನುಗುವ ನಕ್ಷತ್ರಗಳೆಲ್ಲವೂ ಅವನನ್ನು ಸ್ತುತಿಸುವುದು.
ಉನ್ನತೋನ್ನವಾದ ಆಕಾಶಗಳೂ ಅವನನ್ನು ಸ್ತುತಿಸುವುದು.
ಆಕಾಶದ ಮೇಲಿರುವ ಜಲರಾಶಿಯೂ ಅವನನ್ನು ಸ್ತುತಿಸುವುದು.
ಅವುಗಳೆಲ್ಲಾ ಅವನ ನಾಮ ವಿಶೇಷಣಗಳನ್ನು ಸ್ತುತಿಸಲಿ.
ಕಾರಣ ಅವನು ಕಲ್ಪಿಸಿದನು. ಅದರಂತೆ ಅವುಗಳು ಸೃಷ್ಟಿಸಲ್ಪಟ್ಟವು.
ಅವನು ಅವುಗಳನ್ನು ಸಂಸ್ಥಾಪಿಸಿದನು.
ಅವುಗಳು ಉಲ್ಲಂಘಿಸಲಾರದಂತಹಾ ವಿಧಿಯನ್ನು ಅವನು ನಿರ್ಣಯಿಸಿದನು.

(ಕೀರ್ತನೆಗಳು 148 : 1-6)

ಹಳೆ ಒಡಂಬಡಿಕೆಯ ಪ್ರವಾದಿಗಳ ಶೃಂಖಲೆಯಲ್ಲಿ ಕೊನೆಯದಾಗಿ ಬಂದ ಏಸುಕ್ರಿಸ್ತರು ಕೂಡಾ ಕಲಿಸಿದ್ದು ಸರ್ವಸೃಷ್ಟಿಗಳನ್ನು ಸೃಷ್ಟಿಸಿ ಪರಿಪಾಲನೆ ನಡೆಸುತ್ತಿರುವವನು ಏಕನಾದ ಸೃಷ್ಟಿಕರ್ತನಾಗಿದ್ದಾನೆ ಎನ್ನುವ ಸತ್ಯವನ್ನೇ ಆಗಿದೆ. ಯಾವುದೇ ರೀತಿಯ ಕಲಬೆರಕೆ ಇಲ್ಲದ ಏಕದೇವ ವಿಶ್ವಾಸವನ್ನಾಗಿದೆ ಅವರು ಭೋದಿಸಿದ್ದು. ಈ ಸಂಗತಿಯನ್ನು ನಾವು ಸುವಾರ್ತೆಗಳ ಮೂಲಕ ದೃಢೀಕರಿಸಿಕೊಳ್ಳಬಹುದಾಗಿದೆ. ದೇವನ ಕಲ್ಪನೆಗಳಲ್ಲಿ ಸುಪ್ರಧಾನವಾದುದೇನು? ಎಂಬ ಓರ್ವ ವಿದ್ವಾಂಸರ ಪ್ರಶ್ನೆಗೆ ಏಸು ನೀಡಿದ ಉತ್ತರವನ್ನು ಗಮನಿಸಿರಿ.

**"ಇಸ್ರಾಯಿಲನೇ ಕೇಳು! ನಮ್ಮನ್ನು ಸೃಷ್ಟಿಸಿದವನು ಏಕನಾಗಿದ್ದಾನೆ. ನೀನು ನನ್ನ ಸೃಷ್ಟಿಕರ್ತನನ್ನು ಹೃದಯಂಗಮವಾಗಿ, ಆತ್ಮಾರ್ಥವಾಗಿ ಮನಸ್ಸನ್ನು ಕೇಂದ್ರೀಕರಿಸಿಕೊಂಡು ಶ್ರದ್ಧೆಯೊಂದಿಗೆ ಆರಾಧಿಸು" ಇದಾಗಿದೆ ದೇವನ ಸುಪ್ರಧಾನವಾದ ಕಲ್ಪನೆ".** (ಮಾರ್ಕೋಸ್ 12 : 29-30)

ಸರ್ವಶಕ್ತನಾದ ದೇವನಿಂದ ನಿಯುಕ್ತನಾದ ಸಂದೇಶವಾಹಕರಲ್ಲಿ ತಾನು ಓರ್ವನಷ್ಟೆ. ಎನ್ನುವುದನ್ನು ವ್ಯಕ್ತಪಡಿಸುವ ಜೀಸಸ್ ಕ್ರೈಸ್ತರವರ ವಚನವನ್ನು ನೋಡಿರಿ. "ಸಕಲ ಚರಾಚರಗಳ ಸೃಷ್ಟಿಕರ್ತನೂ-ಏಕನೂ ಆದ ನಿನ್ನನ್ನೂ, ನೀನು ನಿಯುಕ್ತಿಗೊಳಿಸಿದ ಏಸುಕ್ರಿಸ್ತ ಕೊಟ್ಟ ಕೆಲಸವನ್ನು ಪೂರ್ತಿಗೊಳಿಸಿ ನಾನು ಭೂಮಿಯಲ್ಲಿ ನಿನ್ನ ಮಹಿಮೆಯನ್ನು ಮಹತ್ವೀಕರಿಸಿದೆ".

(ಯೋಹಾನ 17 : 3-4)

ಇಲ್ಲಿ ಸಾಂದರ್ಭಿಕವಾಗಿ ಒಂದು ವಿಷಯವನ್ನು ವ್ಯಕ್ತಪಡಿಸುತ್ತೇನೆ. ಏಸು ಮತ್ತು ಅವರಿಗಿಂತ ಹಿಂದಿನ ಪ್ರವಾದಿಗಳೆಲ್ಲರೂ ಪ್ರತಿಪಾದಿಸಿದ ಏಕದೇವ ಸಿದ್ಧಾಂತಕ್ಕೆ ವ್ಯತಿರಿಕ್ತವಾದ ಮತ್ತು ವಿಚಿತ್ರವಾದ ಒಂದು ಸಿದ್ಧಾಂತವಾಗಿದೆ ಇಂದು ಕ್ರಿಶ್ಚಿಯನ್ ಸಮೂಹವು ಅಂಗೀಕರಿಸಿರುವ "ತ್ರಿಏಕತ್ವ" ಎಂಬ ಸಿದ್ಧಾಂತ. ಪಿತ, ಪುತ್ರ ಮತ್ತು ಪರಿಶುದ್ಧಾತ್ಮ ಎಂಬ ಈ ಮೂರು ದೇಹಾತ್ಮಗಳ ಸಂಗಮವಾಗಿ ಏಕನಾದ ದೇವನಾಗುತ್ತಾನೆನ್ನುವುದಾಗಿದೆ ತ್ರಿಏಕತ್ವದ ಸಾರ. ಇದು ಸಾಮಾನ್ಯ ಬುದ್ಧಿಗೂ-ವಿಚಾರಕ್ಕೂ ಹೊಂದಿಕೊಳ್ಳದ ವಿಚಾರವಾಗಿದೆ. ಪಿತನು-ಪುತ್ರನು ಮತ್ತು ಪರಿಶುದ್ಧಾತ್ಮವು ಪರಸ್ಪರ ಸ್ವತಂತ್ರ್ಯವೂ - ವ್ಯತಿರಿಕ್ತವೂ ಆದ ವ್ಯಕ್ತಿತ್ವಗಳಾಗಿದ್ದು ಅವುಗಳು ಸಂಯೋಜನೆಗೊಂಡು ಏಕತ್ವವನ್ನು ಪಡೆಯುವುದಾದರೂ ಹೇಗೆ? ವಾಸ್ತವದಲ್ಲಿ ತ್ರಿಏಕತ್ವವನ್ನು ಪುಷ್ಟೀಕರಿಸುವ ಒಂದೇ ಒಂದು ವಚನವೂ ಬೈಬಲಿನ ಹಳೆಯ ಅಥವಾ ಹೊಸ ಒಡಂಬಡಿಕೆಗಳಲ್ಲಿ ಇರುವುದಿಲ್ಲ. ಇದರಿಂದಲೇ ತ್ರಿಏಕತ್ವವೆಂಬ

ವಿಶ್ವಾಸವು ಏಸುಕ್ರಿಸ್ತರೂ, ಅವರಿಗಿಂತ ಹಿಂದಿನ ಪ್ರವಾದಿಗಳೂ ಬೋಧಿಸಿದ್ದಲ್ಲವೆನ್ನುವುದು ವ್ಯಕ್ತವಾಗುತ್ತದೆ.

## ಏಕದೇವಾರಾಧನೆ

ಇಸ್ಲಾಮಿನಲ್ಲಿ ತೌಹೀದ್ ಸೃಷ್ಟಿಕರ್ತನೂ, ಸಂರಕ್ಷನೂ ಆದ ಏಕದೇವನಲ್ಲಿ ವಿಶ್ವಾಸವಿರಿಸುವುದಕ್ಕಷ್ಟೆ ಸೀಮಿತವಾದುದಲ್ಲ. ಪರಮ ದಯಾಮಯನು, ಕರುಣಾನಿಧಿಯೂ ಆದ ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆನ್ನುವ ಶರತ್ತು ಕೂಡಾ ಅದರಲ್ಲಿ ಒಳಪಡುತ್ತದೆ. 'ಲಾ ಇಲಾಹ ಇಲ್ಲಲ್ಲಾಹ್' ಎನ್ನುವ ಇಸ್ಲಾಮಿನ ಸಾಕ್ಷ್ಯ ವಚನವು ಇದೇ ಆಶಯವನ್ನಾಗಿದೆ ಪ್ರತಿಬಿಂಬಿಸುತ್ತಿರುವುದು. 'ಅಲ್ಲಾಹನಲ್ಲದೆ ಆರಾಧ್ಯನಿಲ್ಲ ' ಎಂದಾಗಿದೆ ಈ ಪವಿತ್ರ ವಚನದ ತಾತ್ಪರ್ಯ. ಕಲ್ಲಿನಿಂದ ಮೊದಲ್ಗೊಂಡು ವಿಗ್ರಹಗಳ ತನಕ, ಆಲದ ಮರದಿಂದ ತೊಡಗಿ ತುಳಸಿಕಟ್ಟೆಯ ತನಕ, ಗೋರಿಗಳಿಂದ ಪೂರ್ವಿಕರ ತನಕ, ನಾಗರಹಾವಿನಿಂದ ಪಶುಗಳ ತನಕ, ದೇವಚರರಿಂದ ಪಿಶಾಚಿಗಳ ತನಕ, ಸತ್ಯವಂತರೂ, ಪ್ರಾಮಾಣಿಕರೂ ಆದ ಸಜ್ಜನರಿಂದ ಮಹಾನ್ ಪ್ರವಾದಿಗಳ ತನಕ ಯಾರೂ ಯಾವುದೂ ಆರಾಧನೆಯ ಅರ್ಹತೆಯನ್ನು ಪಡೆದಿರುವುದಿಲ್ಲ. ಆರಾಧನೆಗೆ ಅರ್ಹನಾದವನು ಕೇವಲ ಅಲ್ಲಾಹನು ಮಾತ್ರ. ಇದಾಗಿದೆ ಇಸ್ಲಾಮಿನ ಮೂಲತತ್ವ.

ಮನುಷ್ಯರಿಗಿಂತ ಶ್ರೇಷ್ಠರಾದ ಮತ್ತೊಂದು ಸೃಷ್ಟಿ ಇಲ್ಲವೆನ್ನುವುದನ್ನು ಪವಿತ್ರ ಕುರ್‌ಆನ್ ಸೂಚಿಸುತ್ತದೆ.

**"ನಿಶ್ಚಯವಾಗಿಯೂ ನಾವು ಮನುಷ್ಯರನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಿರುತ್ತೇವೆ."** (95-94) ಎಂದು ಅಲ್ಲಾಹು ಕೇಳುತ್ತಾನೆ.

ಮನುಷ್ಯರಿಗಿಂತ ಉತ್ಕೃಷ್ಟವಾದ ಒಂದು ಅಸ್ತಿತ್ವವಾಗಿದೆ ಅಲ್ಲಾಹನದು. ತನ್ನ ಶಕ್ತಿ ಸಾಮರ್ಥ್ಯಕ್ಕೆ ಮೀರಿದ ಹಲವಾರು ವಿಷಯಗಳನ್ನು ಮನುಷ್ಯನು ಸ್ವಯಂ ಅವನ ಶರೀರದಲ್ಲೂ ಅವನ ಪರಿಸರದಲ್ಲೂ ನಿರಂತರ ಕಾಣುತ್ತಿರುತ್ತಾನೆ. ಅವನನ್ನು ಸಜೀವ ಸ್ಥಿತಿಯಲ್ಲಿಡುವ ಅವನ ಹೃದಯ ಮಿಡಿತವೊ, ರಕ್ತ ಸಂಚಾರವೊ ಇತರ ಜೀವಿಗಳಿಂದ ಅವನನ್ನು ಪ್ರತ್ಯೇಕಿಸಿ ನಿಲ್ಲಿಸುವ ಮೆದುಳಿನ ಪ್ರವರ್ತನೆಗಳು ಯಾವೂದು ಕೂಡಾ ಅವನ ನಿಯಂತ್ರಣದಲ್ಲಿ ಒಳಪಡುವುದಿಲ್ಲವೆನ್ನುವುದನ್ನು ಅವನು ಅರಿತುಕೊಂಡಿದ್ದಾನೆ. ಭೂಮಿಯಲ್ಲಿ ಜೀವ ಜಾಲಗಳ ಅಸ್ತಿತ್ವಕ್ಕೆ ಪೂರಕ ಸ್ಥಿತಿಯಲ್ಲಿರುವ ಸೂರ್ಯನ ಚಲನವಲನಗಳಾಗಲಿ, ಆಕಾಶ ಲೋಕಗಳ ವ್ಯವಸ್ಥಾಪನೆಗಳಾಗಲಿ ಯಾವುದರಲ್ಲೂ ತನ್ನ ಪ್ರಯತ್ನವೊ, ಸಾಧನೆಯೊ ಇಲ್ಲವೆನ್ನುವುದನ್ನು ಅವನು ಮನಗಾಣುತ್ತಾನೆ. ಈ ಅರಿವೇ ಅವನನ್ನು ಅವನಿಗಿಂತ ಶಕ್ತಿವಂತನಾದವನಲ್ಲಿ ಸಹಾಯ ಅಭ್ಯರ್ಥಿಸಿಕೊಳ್ಳಲು ಅವನನ್ನು ಪ್ರೇರೇಪಿಸುತ್ತದೆ. ಈ ಸಹಾಯಾಭ್ಯರ್ಥನೆಯೇ ಪ್ರಾರ್ಥನೆ. ವೈದ್ಯರೊಂದಿಗೆ ಹೋಗಿ ಸಹಾಯ ಅಭ್ಯರ್ಥನೆ ಮಾಡುವುದು, ಮ್ಹಾಲಕನೊಂದಿಗೆ ಕೆಲಸಗಾರನು ಸಹಾಯ ಅಭ್ಯರ್ಥನೆ ಮಾಡುವುದು ಪ್ರಾರ್ಥನೆಯ ಪರಿಧಿಯಲ್ಲಿ ಬರುವುದಿಲ್ಲ. ಅದು ಕಾರ್ಯಕಾರಣ ಸಂಬಂಧದಲ್ಲಿ ಒಳಪಡುವ ಪ್ರಕ್ರಿಯೆಯಾಗಿದೆ. ಕಾರ್ಯ ಕಾರಣ

ಬಂಧಕ್ಕೆ ಅತೀತವಾದ ಯಾಚನೆಯಾಗಿದೆ ಪ್ರಾರ್ಥನೆ. ಈ ಪ್ರಾರ್ಥನೆಯೇ ಆರಾಧನೆಯಾಗಿದೆ. ಪ್ರಾರ್ಥನೆಯಾಗಿದೆ ಆರಾಧನೆಯ ತಿರುಳು. ಪ್ರಾರ್ಥನೆಯ ಉದ್ದೇಶವಿಲ್ಲದ ಆರಾಧನೆ ಕೇವಲ ಕಾಟಾಚಾರವೆನಿಸುತ್ತದೆ. ಪ್ರಾರ್ಥನೆಯ ಆತ್ಮವು ಪ್ರಾರ್ಥಿಸುವವನ ಹೃದಯಾಂತರಾಳದಲ್ಲಿರುತ್ತದೆ. ಎಷ್ಟೇ ಸುಂದರವಾದ ಪ್ರಾರ್ಥನೆಯ ಗೀತೆಯಾಗಿದ್ದರೂ ಅದು ಅವನ ಹೃದಯಾಂತರಾಳದಿಂದ ಭಯ-ಭಕ್ತಿ ಪೂರಕವಾಗಿ ಹೊರಬಂದಾಗ ಮಾತ್ರ ಅದು ಅರ್ಥಪೂರ್ಣವೆನಿಸುತ್ತದೆ. ಅನ್ಯಥಾ ಅದೊಂದು ಕಾಟಾಚಾರ ಮಾತ್ರ. ಪ್ರಾರ್ಥಿಸುವವನ ಹೃದಯವು ಪ್ರಾರ್ಥಿಸಲ್ಪಡುವವನ ಸಹಾಯ ಆಕಾಂಕ್ಷಿಸುವಾಗ ಮಾತ್ರ ಪ್ರಾರ್ಥನೆಯೆಂಬ ಪದವು ಅನ್ವರ್ಥವೆನಿಸುತ್ತದೆ. ಆರಾಧನಾ ಕರ್ಮಗಳು ಸಜೀವವೆನಿಸಬೇಕಾದರೆ ಅದರಲ್ಲಿ ಆತ್ಮಾರ್ಥವಾದ ಪ್ರಾರ್ಥನೆ ಅಂತರ್ಗತವಾಗಿರಲೇಬೇಕು.

ಹಾಗಾದರೆ ಮನುಷ್ಯನು ಆರಾಧನೆಗಳನ್ನು ಯಾರಿಗೆ ಅರ್ಪಿಸಬೇಕು? ಅವನು ಪ್ರಾರ್ಥಿಸಬೇಕಾದ್ದು ಯಾರೊಂದಿಗೆ? ಸಕಲ ಶಕ್ತಿ -ಸಾಮರ್ಥ್ಯಗಳ ಒಡೆಯನಾರೋ... ಯಾರು ಅದೃಶ್ಯವಾದುದನ್ನು, ಹೃದಯಾಂತರಾಳದ ಕವಾಟದಲ್ಲಿ ಅಂತರ್ಗತವಾಗಿರುವುದನ್ನು ಸುವ್ಯಕ್ತವಾಗಿ ಅರಿಯುತ್ತಾನೋ ಅವನಿಗಾಗಿದೆ ಆರಾಧನೆ. ಅವನು ಮಾತ್ರನಾಗಿದ್ದಾನೆ ಅದಕ್ಕೆ ಅರ್ಹನಾದವನೆಂದು ಸಾಮಾನ್ಯ ಬುದ್ಧಿಯೂ ಸಮ್ಮತಿಸುವ ಸಂಗತಿ. ಸೃಷ್ಟಿ ಕರ್ತನೂ -ಪರಿಪಾಲಕನೂ ಆದ ಅಲ್ಲಾಹನು ಮಾತ್ರ ಆರಾಧನಾರ್ಹನೆಂದಾಗಿದೆ ಇಸ್ಲಾಮ್ ಪ್ರತಿಪಾದಿಸುತ್ತಿರುವುದು. ಪ್ರಾರ್ಥನೆ-ಹರಕೆ-ಬಲಿ-ಅರ್ಪನೆ-ಉಪಾಸನೆಗಳೆಲ್ಲವೂ ಅಲ್ಲಾಹನಿಗೆ ಅರ್ಪಿಸಲ್ಪಡುವಾಗಲೇ ಇಸ್ಲಾಮ್ ಪ್ರತಿಪಾದಿಸುವ ಏಕದೇವ ವಿಶ್ವಾಸವು ಪೂರ್ಣಾರ್ಥದಲ್ಲಿ ಸಾಕಾರವಾಗುವುದು. ಏಕೈಕನಾದ ಸೃಷ್ಟಿಕರ್ತನನ್ನು ಮಾತ್ರ ಆರಾಧಿಸಬೇಕೆಂದಾಗಿದೆ ಅಲ್ಲಾಹನು ಮನುಷ್ಯರನ್ನು ಸೃಷ್ಟಿಸಿರುವುದು ಎಂದು ಕುರ್‌ಆನ್ ಬಹಿರಂಗ ಪಡಿಸುತ್ತದೆ.

**"ನಾನು ಯಕ್ಷಗಳನ್ನೂ ಮನುಷ್ಯರನ್ನು ಸೃಷ್ಟಿಸಿರುವುದು ನನ್ನ ಆರಾಧನೆಗಾಗಿಯೇ ಹೊರತು ಬೇರಾವುದೇ ಕಾರ್ಯಕ್ಕಾಗಿ ಅಲ್ಲ. ನಾನು ಅವರಿಂದ ಜೀವನಾಧಾರವನ್ನೇನೂ ಬಯಸುವುದಿಲ್ಲ ಮತ್ತು ಅವರು ನನಗೆ ಉಣಿಸಬೇಕೆಂದೂ ಅಪೇಕ್ಷಿಸುವುದಿಲ್ಲ. ಅಲ್ಲಾಹನು ಮಹಾ ಅನ್ನದಾತನು, ಮಹಾಶಕ್ತಿಶಾಲಿ ಮತ್ತು ಪ್ರಚಂಡನಾಗಿದ್ದಾನೆ."** (51/56-58)

**"ಅಲ್ಲಾಹನು ತನ್ನ ಹೊರತು ಇತರ ಆರಾಧ್ಯನಿಲ್ಲವೆಂದು ಸ್ವತಃ ಸಾಕ್ಷಿ ನುಡಿಯುತ್ತಾನೆ. ಮತ್ತು ದೇವಚರರೂ ಎಲ್ಲಾ ಜ್ಞಾನವಂತರೂ ಆ ಪ್ರಬಲ ಯುಕ್ತಿ ಪೂರ್ಣನ ಹೊರತು ವಾಸ್ತವದಲ್ಲಿ ಬೇರೆ ಆರಾಧ್ಯನಿಲ್ಲವೆಂದು ಸತ್ಯ ಮತ್ತು ನ್ಯಾಯದೊಂದಿಗೆ ಸಾಕ್ಷಿ ನುಡಿಯುತ್ತಾರೆ."** (3-18)

ಉಪನಿಷತ್‌ಗಳಲ್ಲಿ ಕೆಲವು ವಿವಿಧ ದೇವರುಗಳೊಂದಿಗೆ ಪ್ರಾರ್ಥಿಸುವ ಪ್ರಾರ್ಥನೆಗಳು ಒಳಗೊಂಡಿದೆ. ಆದರೂ ಇನ್ನು ಕೆಲವು ಉಪನಿಷತ್ ಸೂಕ್ತಗಳು ಏಕದೇವಾರಾಧನೆಯ ಮಹತ್ವವನ್ನು ಬಹುದೇವಾರಾಧನೆಯ ನಿರರ್ಥಕತೆಯನ್ನೂ ಸುವ್ಯಕ್ತವಾಗಿ ಪ್ರತಿಬಿಂಬಿಸುತ್ತದೆ. ಆದಿಯೂ ಅನಂತನೂ ಆದ ಏಕದೇವನನ್ನೇ ಆರಾಧಿಸಬೇಕೆಂದು ಸೂಚಿಸುವ ಈಶಾವಾಸ್ಯೋಪನಿಷತ್‌ನ ಒಂದು ಶ್ಲೋಕವನ್ನು ನೋಡಿರಿ.

**ಅಂಧಂ ತಮಃ ಪ್ರವಿಶಂತಿಯೇ ಸಂಭೂತಿ ಮುಪಾಸತೇ**
**ತತೋ ಭೂಯ ಇವತೇ ತಮೋಯ ಸಂಭೂತ್ಯಾಂ ರತಃ**

**"ನಶ್ವರ ದೇವರು, ಮನುಷ್ಯರಾದಿಗಳನ್ನು ಪೂಜಿಸುವವರು ಅಜ್ಞಾನವೆಂಬ ಘೋರ ಅಂಧಕಾರದಲ್ಲಿ ಪ್ರವೇಶಿಸುವರು. ಅನಶ್ವರವಾದ ಪರಮಾತ್ಮನ ಕುರಿತು ಮಿಥ್ಯಾಭಿಮಾನದಿಂದ ಕೂಡಿರುವವರು ಕೂಡಾ ಅದೇ ಘೋರ ಅಂಧಕಾರವನ್ನು ಪ್ರವೇಶಿಸುವರು"** (ಈಶಾವಾಸ್ಯೋಪನಿಷತ್ 12)

## ಏಕದೇವಾರಾಧನೆ
## ಯಹೂದಿ ಮತ್ತು ಕ್ರೈಸ್ತ ಧರ್ಮದಲ್ಲಿ

ಮೋಶೆ(ಮೂಸಾ(ಅ)ರವರಿಗೆ ದೇವನು ನೀಡಿದ ಹತ್ತು ನಿರ್ದೇಶನಗಳಲ್ಲೂ ಏಕನಾದ ಸೃಷ್ಟಿಕರ್ತನಲ್ಲದೆ ಆರಾಧಿಸಲ್ಪಡಬಾರದೆನ್ನುವ ತತ್ವವನ್ನು ಕಾಣಬಹುದಾಗಿದೆ. ಯಹೋವ ಹೇಳುತ್ತಿರುವುದಾಗಿ ಹಳೆಯ ಒಡಂಬಡಿಕೆಯಲ್ಲಿನ ಉದ್ದರಣೆಯನ್ನು ನೋಡಿ **"ನಿನ್ನ ಆರಾಧ್ಯನಾದ ಸೃಷ್ಟಿಕರ್ತನು ನಾನಾಗಿರುವೆನು. ಈಜಿಪ್ಟ್ ದೇಶದಲ್ಲಿ ದಾಸ್ಯತ್ವದ ಬಂಧನದಲ್ಲಿದ್ದ ನಿನ್ನನ್ನು ವಿಮೋಚಿಸಿದವನು ನಾನೇ ಆಗಿದ್ದೇನೆ. ನಾನಲ್ಲದೆ ನಿನಗೆ ಇನ್ನಾರೂ ಆರಾಧ್ಯನಿರಬಾರದು, ಯಾವುದೇ ವಿಗ್ರಹಗಳನ್ನು ನೀನು ಅವಲಂಬಿಸ ಕೂಡದು. ನೀನು ಅವುಗಳ ಮುಂದೆ ತಲೆ ತಗ್ಗಿಸುವುದೋ ಅವುಗಳನ್ನು ಪೂಜಿಸುವುದೊ ಮಾಡಬಾರದು"**(ವಿಮೋಚನಾ ಕಾಂಡ 20:2-5)

ಹಳೆಯ ಒಡಂಬಡಿಕೆಯ ಪ್ರವಾದಿಗಳ ಉತ್ತರಾದಿಕಾರಿಯಾಗಿ ಬಂದ ಏಸು (ಈಸ(ಅ) ಬೋಧಿಸಿದ ತತ್ವವು ಏಕನಾದ ಸೃಷ್ಟಿಕರ್ತನನ್ನು ಆರಾಧಿಸಬೇಕು ಎನ್ನುವುದಾಗಿತ್ತು. ಭೌತಿಕ ಸುಖಾಡಂಭರಗಳನ್ನು ತೋರ್ಪಡಿಸಿ ತನ್ನಲ್ಲಿ ಪ್ರಲೋಭನೆ ಉಂಟು ಮಾಡಲು ಪ್ರಯತ್ನಿಸಿದ ಸೈತಾನನೊಂದಿಗೆ ಕೂಡಾ ಕ್ರೈಸ್ತ ಹೇಳಿದ್ದು ನನ್ನನ್ನೂ ಸಕಲರನ್ನು ಸೃಷ್ಟಿಸಿದ ಏಕೈಕನಾದ ಸೃಷ್ಟಿಕರ್ತನೂ-ಸಂರಕ್ಷಕನೂ ಆದವನು ಮಾತ್ರ ಆರಾಧನೆಗೆ ಅರ್ಹನಾಗಿರುತ್ತಾನೆ. ಆದ್ದರಿಂದ ಅವನಿಗೆ ಎಲ್ಲರು ಸಾಷ್ಟಾಂಗವೆರಗಬೇಕು. ಅವನನ್ನೇ ಆರಾಧಿಸಬೇಕು ಎಂದಾಗಿದೆ. **"ಸೈತಾನನೇ, ತೊಲಗಾಚೆ ನನ್ನ ಮತ್ತು ನಿನ್ನನ್ನು ಸೃಷ್ಟಿಸಿರುವ ದೇವನನ್ನು ಮಾತ್ರ ಆರಾಧಿಸಬೇಕೆಂದೂ ಅವನಿಗೆ ಸಾಷ್ಟಾಂಗವೆರಗಬೇಕೆಂದೂ ಬರೆದಿಡಲಾಗಿದೆ"**(ಮತ್ತಾಯಃ 4/10)

ಏಕನೂ, ಸರ್ವೋನ್ನತನೂ ಆದ ಸೃಷ್ಟಿಕರ್ತನನ್ನು ಮಾತ್ರ ಆರಾಧಿಸುವ ಮನುಷ್ಯರಲ್ಲಿ ವರ್ಗ-ವರ್ಣಗಳ ಬೇಧವಿರದು. ಅಹಂಕಾರವೆಂಬ ವ್ಯಾದಿಯು ಅವರ ಸಮೀಪಕ್ಕೂ ಸುಳಿಯದು, ಪಾಶ್ಚಾತ್ಯರ ಮಾನವೀಯತಾವಾದ(Humanism) ಮತ್ತು ಮಾರ್ಕ್ಸಿಸಂ ಮನುಷ್ಯನು ಪ್ರಪಂಚದಲ್ಲಿ ಅತ್ಯುನ್ನತನು ಅವನನ್ನು ನಿಯಂತ್ರಿಸುವ ಅಥವಾ ಬುದ್ಧಿಯಲ್ಲೋ, ಯುಕ್ತಿಯಲ್ಲೋ ಅವನನ್ನು ಮೀರುವ ಯಾವ ಶಕ್ತಿಯೂ ಲೋಕದಲ್ಲಿಲ್ಲವೆಂದು ವಾದಿಸಲು ತೊಡಗಿದಾಗ ಅಹಂಕಾರವೆಂಬ ರಾಕ್ಷಸಾಕಾರದ ವೃಕ್ಷದ ಬೀಜವು ಮನುಷ್ಯ ಹೃದಯದಲ್ಲಿ ಮೊಳಕೆಯೊಡೆಯಿತು. ಜನ ಸಮೂಹದ ನೈತಿಕ ಅದಃಪತನಕ್ಕೂ ಅದುವೇ ಕಾರಣವಾಯಿತು. ಅದೇ ವೇಳೆ ಮಾನವ ನಿರ್ಮಿತ ಧರ್ಮಾವಲಂಬಿಗಳು ಕಲ್ಲುಗಳನ್ನೂ, ಶಿಲೆಗಳನ್ನೂ, ಗಿಡ-ಮರಗಳನ್ನೂ, ಜೀವ-ಜಂತುಗಳನ್ನೂ,

ಸ್ಮಾರಕಗಳನ್ನೂ, ಗೋರಿಗಳನ್ನೂ, ಆದರ್ಶ ಪುರುಷರನ್ನೂ-ಮಾತೆಯರನ್ನೂ, ಆರಾಧ್ಯರನ್ನಾಗಿ ಮಾಡಿಕೊಂಡರು. ತನಗಿಂತಲೂ ದುರ್ಬಲರಾದ, ಕಾಣಲಾರದ, ಆಲಿಸಲಾರದ ಮೂಗಿನ ಹೊಳ್ಳೆಗಳೊಳಗೆ ಇರುವೆ ನುಸುಳುತ್ತಿದ್ದರೂ ಅದನ್ನು ತಡೆಯಲಾರದಂತಹಾ ತಮ್ಮ ಆರಾಧ್ಯರ ಮುಂದೆ ಕಾಣಿಕೆಗಳನ್ನೂ, ಪೂಜೆ-ಪುರಸ್ಕಾರಗಳನ್ನೂ ಅರ್ಪಿಸುವವರ ಹೃದಯಗಳು ಸ್ವಯಂ ವಿವೇಕವನ್ನೂ ವಿವೇಚನಾ ಶಕ್ತಿಯನ್ನೂ ಕಳೆದುಕೊಳ್ಳುವುದು ಸಹಜವಾಗಿದೆ. ಒಂದು ಪುಣ್ಯಕ್ಷೇತ್ರದಲ್ಲಿ ಅಭಯ ಲಭಿಸದೇ ಹೋದಾಗ ಮತ್ತೊಂದು ಪುಣ್ಯಕ್ಷೇತ್ರದ ಕಡೆಗೆ ಓಡುವಂತಹಾ ಮನೋಭಾವವನ್ನುಂಟುಮಾಡುವುದು ಈ ಅವಿವೇಕತನವಾಗಿದೆ. ಧರ್ಮವೆನ್ನುವುದು ಮನುಷ್ಯನಲ್ಲಿ ಪ್ರಾಕೃತಿಕವಾಗಿರುವ ಭಯ-ಭೀತಿಯ ಪ್ರತಿಫಲನವಾಗಿದೆ ಎಂದು ವಾದಿಸುವ, ಯಾವುದೇ ಆರಾಧ್ಯರನ್ನು ಸ್ವೀಕರಿಸಿಕೊಳ್ಳದ ಅಹಂಕಾರಿಗಳು ಮತ್ತು ಸೃಷ್ಟಿಗಳನ್ನೇ ಆರಾಧ್ಯರಾಗಿ ಸ್ವೀಕರಿಸಿದ ಅವಿವೇಕಿಗಳ ಮಧ್ಯೆ ಸೃಷ್ಟಿಕರ್ತನನ್ನು ಮಾತ್ರ ಆರಾಧಿಸಬೇಕೆನ್ನುವ ಇಸ್ಲಾಮಿನ ತತ್ವವು ನೆಲೆ ನಿಂತಿದೆ. ಇದು ಮನುಷ್ಯನನ್ನು ಆತ್ಮಾಭಿಮಾನಿಯಾಗಿಯೂ ವಿನಯವಂತನಾಗಿಯೂ ಮಾರ್ಪಡಿಸುತ್ತದೆ.

ಬಹುದೇವ ವಿಶ್ವಾಸವೆಂಬ ಚಂಚಲತೆಯಿಂದ ಮನುಷ್ಯನನ್ನು ಮುಕ್ತಗೊಳಿಸಿ ಅವನ ಹೃನ್ಮನದಲ್ಲಿ ಸ್ಥಿರತೆಯನ್ನೂ ಏಕಾಗ್ರತೆಯನ್ನೂ ತುಂಬುವ ಶಕ್ತಿ ಏಕದೇವಾರಾಧನೆಗಿದೆ. ಚಿತ್ರ-ವಿಚಿತ್ರವಾದ ದೇವರುಗಳು ಮತ್ತು ಅವುಗಳ ದಲ್ಲಾಲಿಗಳಾದ ಪುರೋಹಿತರುಗಳು ಸೇರಿ ಸೃಷ್ಟಿಸಿರುವ ಕಾರ್ಗತ್ತಲಿನಿಂದ ಸರಿದು ನಿಂತು ಚಿಂತನ-ಮಂಥನಗಳನ್ನು ನಡೆಸಿ ಸತ್ಯವನ್ನು ಕಂಡುಕೊಂಡು ಆ ಪ್ರಕಾರ ನಡೆದುಕೊಳ್ಳಲು ಇದು ಅವನನ್ನು ಪ್ರೇರೇಪಿಸುತ್ತದೆ. ಆಕಾಶ ಕಾಯಗಳು ದೇವ-ದೇವತೆಗಳಾಗಿದ್ದಾರೆನ್ನುವ ಸಂಕಲ್ಪವು ಅವುಗಳ ಕುರಿತು ವೈಜ್ಞಾನಿಕ ಅಧ್ಯಯನದ ವರದಿಗಳು ಬಂದಾಗ ಕುಸಿದು ಬಿದ್ದು ಧೂಳಾಗಿ ಹೋಯಿತು. ಪ್ರಪಂಚದಲ್ಲಿರುವ ಸರ್ವ ಚರಾಚರ ವಸ್ತುಗಳು ದೇವನ ಸೃಷ್ಟಿಗಳಾಗಿವೆ ಎಂದು ಮನವರಿಕೆ ಮಾಡಿಕೊಂಡ ಏಕದೇವ ವಿಶ್ವಾಸಿಯ ಮಟ್ಟಿಗೆ ಅವುಗಳ ಕುರಿತು ಅಧ್ಯಯನವು ಅಜೇಯನಾದ ದೇವನ ಸೃಷ್ಟಿಗಳ ಹಿಂದಿನ ವಿಸ್ಮಯಗಳ ಬಗೆಗಿನ ಅನ್ವೇಷಣೆ ಮಾತ್ರವಾಗಿದೆ. ಆದ್ದರಿಂದಲೇ ಕುರ್‌ಆನ್ ಖಗೋಳ ವಿಜ್ಞಾನದ ಕುರಿತು ಅಧ್ಯಯನವನ್ನು ಪ್ರೋತ್ಸಾಹಿಸುತ್ತದೆ.

## ಮಿಥ್ಯ ಶಕ್ತಿಯ ಆರಾಧನೆಯ ನ್ಯಾಯೀಕರಣಕ್ಕೆ ಉತ್ತರ

ವಿಗ್ರಹಗಳನ್ನು, ದರ್ಗಾಗಳನ್ನು, ಪುಣ್ಯ ಪುರುಷರನ್ನು ಕರೆದು ಪ್ರಾರ್ಥಿಸುವವರು, ಅವುಗಳಿಗೆ ಕಾಣಿಕೆಗಳನ್ನು ಹರಕೆಗಳನ್ನು ಅರ್ಪಿಸುವವರು ನಾವು ಕೂಡಾ ವಿಶ್ವಾಸಿಗಳೆಂದೂ, ನಾವು ಅವುಗಳನ್ನು ಮಹೋನ್ನತನಾದ ದೇವನಿಗೆ ಮಧ್ಯವರ್ತಿಗಳಾಗಿ ಅಷ್ಟೇ ಕಾಣುತ್ತೇವೆಂದೂ ಹೇಳುತ್ತಾ ದೇವೇತರರಿಗೆ ಭಯಭಕ್ತಿ ಪ್ರಕಟಿಸುವ ತಮ್ಮ ಪ್ರವರ್ತನೆಗಳನ್ನು ನ್ಯಾಯೀಕರಿಸುವುದನ್ನು ಕಾಣಬಹುದಾಗಿದೆ. ಮನುಷ್ಯನ ಹೃದಯದ ಅಂತರಾಳದ ಆಳದಲ್ಲಿ ರೂಪತಾಳುವ ವಿಷಯ-ವಿಕಾರಗಳ ಸಂಘರ್ಷಗಳನ್ನು ಸುಸ್ಪಷ್ಟವಾಗಿ ಅರಿತುಕೊಳ್ಳಲು ಸಮರ್ಥನಿರುವ ಸೃಷ್ಟಿಕರ್ತನಿಗೆ ಒಂದು ಮಧ್ಯವರ್ತಿಯ ಅವಶ್ಯಕತೆ ಇದೆ ಎನ್ನುವುದನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ.

**"ಅವನು ನಮಗೆ ಅತ್ಯಂತ ನಿಕಟನಾಗಿರುವನೆಂದೂ ಅವನನ್ನು ಕರೆದು ಪ್ರಾರ್ಥಿಸಿದಾಗ ಅವನು**

**ಆ ಪ್ರಾರ್ಥನೆಗಳನ್ನು ಆಲಿಸುತ್ತಾನೆಂದೂ ಅದಕ್ಕೆ ಉತ್ತರಿಸುತ್ತಾನೆಂದೂ ಕುರ್‌ಆನ್ ನಮಗೆ ಕಲಿಸಿಕೊಡುತ್ತದೆ"**(2-186)

ಸೃಷ್ಟಿಕರ್ತನ ಆರಾಧನೆಯಲ್ಲಿ ಏಕಾಗ್ರತೆಯನ್ನು ಕಂಡುಕೊಳ್ಳುವ ಸಲುವಾಗಿ ಮಾತ್ರ ನಾವು ವಿಗ್ರಹಗಳನ್ನು ಅವಲಂಬಿಸುತ್ತೇವೆಂದು ಹೇಳುವವರಿದ್ದಾರೆ. ಅಂದರೆ ಇಲ್ಲಿ ವಿಗ್ರಹಗಳು ನೆಪಮಾತ್ರ. ಆರಾಧನೆ ಅಂದರೆ ಭಯ-ಭಕ್ತಿ ಸೃಷ್ಟಿಕರ್ತನಿಗೇ ಸಲ್ಲುವುದೆನ್ನುವುದು ಅವರ ವಾದವಾಗಿದೆ. ಈ ವಾದದಲ್ಲಿ ಹುರುಳಿಲ್ಲ. ಆರಾಧನೆಯಲ್ಲಿ ಏಕಾಗ್ರತೆಯನ್ನು ಕಂಡುಕೊಳ್ಳಲು ಸ್ವಯಂ ಕಲ್ಪಿಸಿಕೊಂಡ ದೇವನ ಒಂದು ಚಿತ್ರ ಅಥವಾ ಮೂರ್ತಿಯ ಅಗತ್ಯವಿದೆಯೆಂದೂ, ಹಾಗಿದ್ದಾಗ ಮಾತ್ರ ಆರಾಧನೆಯು ಪರಿಪೂರ್ಣವಾಗುವುದೆಂದೂ ಹೇಳುವುದಕ್ಕೆ ಅರ್ಥವಿಲ್ಲ. ಇಲ್ಲಿ ಏಕಾಗ್ರತೆ ಅಥವಾ ಶ್ರದ್ಧೆ ಉಂಟಾಗುವುದಕ್ಕೆ ಬೇಕಾಗಿರುವುದು ಕಪೋಲ ಕಲ್ಪಿತ ಚಿತ್ರಗಳಲ್ಲಿ ಬದಲಾಗಿ ಈ ವಿಸ್ಮಯಪೂರ್ಣವಾದ ಪ್ರಪಂಚವನ್ನೂ ಅದರಲ್ಲಿರುವ ಸಕಲ ಚರಾಚರಗಳನ್ನೂ ಸೃಷ್ಟಿಸಿ ಪರಿಪಾಲನೆ ಮಾಡುತ್ತಿರುವ ಆ ಶಕ್ತಿ ಸಾಮರ್ಥ್ಯಗಳ ಕುರಿತಾದ ಬೋಧ(ಅರಿವು)ವಾಗಿದೆ. ಆ ಅಪರಿಮಿತ ಶಕ್ತಿ-ಸಾಮರ್ಥ್ಯಗಳಿಂದ ನನಗೆ ಸಹಾಯ ನೀಡೆಂಬ ಒಡಳಾಲದ ಅಭ್ಯರ್ಥನೆಯಾಗಿದೆ ಆರಾಧನೆ. ಆದ್ದರಿಂದ ಆರಾಧ್ಯನಿಗೆ ರೂಪ ಕಲ್ಪಿಸಿಕೊಳ್ಳುವುದಲ್ಲ ಬದಲಾಗಿ ಅವನ ಶಕ್ತಿ ಸಾಮರ್ಥ್ಯಗಳ ಕುರಿತು ಅರಿವು ಪಡೆಯುವ ಕಾರ್ಯವನ್ನು ಆರಾಧಕರು ಮೊದಲು ಮಾಡಬೇಕಾಗಿದೆ. ವಿಗ್ರಹ ಆರಾಧಕರ ಮನಸ್ಸಿನಲ್ಲಿ ವಿಗ್ರಹಗಳ ರೂಪವೇ ದೇವನಾಗಿ ಪ್ರತಿಷ್ಠಾಪನೆಗೊಂಡಿರುತ್ತದೆ. ಅವುಗಳ ಸ್ವಭಾವ ಮತ್ತು ಪ್ರವರ್ತನೆಯನ್ನೇ ಅವರು ದೇವನ ಸಾಮರ್ಥ್ಯವೆಂದು ತಿಳಿದುಕೊಂಡಿರುತ್ತಾರೆ. ವಿಗ್ರಹ ಆರಾಧಕರ ಪ್ರಾರ್ಥನಾ ಗೀತೆಗಳಲ್ಲಿ ದೇವನ ಮಹಿಮೆಗಳೆಂದು ಹಾಡಿ ಹೊಗಲಲ್ಪಡುವುದು ಆ ವಿಗ್ರಹವು ಪ್ರತಿನಿಧಿಸುವ ವ್ಯಕ್ತಿಯ ಸ್ವಭಾವ ಮತ್ತು ಪ್ರವರ್ತನೆಗಳ ಕುರಿತಾಗಿರುತ್ತದೆ. ಆದ್ದರಿಂದ ವಿಗ್ರಹಾರಾಧನೆಯನ್ನು ಏಕದೇವಾರಾಧನೆಯಂತೆ ಎಂದು ಭಾವಿಸುವುದಕ್ಕೆ ಯಾವುದೇ ಅರ್ಥವಿಲ್ಲ.

ಪ್ರತಿಯೊಬ್ಬರೂ ಅವರಿಗೆ ಇಷ್ಟ ಬಂದಂತೆ ದೇವನನ್ನು ಆರಾಧಿಸಿದರೆ ಸಾಕು ಎಂಬ ಪರಿಗಣನೆಯನ್ನು ಇಸ್ಲಾಮ್ ಒಪ್ಪುವುದಿಲ್ಲ. ಈ ದೃಷ್ಟಿಕೋನವು ಸರಿ ಎಂದಾದರೆ ಶವದ ಅವಯವಗಳನ್ನು ಕತ್ತರಿಸಿ ತೆಗೆದು ಸಂಹಾರ ನೃತ್ಯ ನಡೆಸುವ ಘೋರ ಮತ ಸಂಪ್ರದಾಯವನ್ನೂ, ಲೈಂಗಿಕ ಅವಯವಗಳು ಹೊರ ಚೆಲ್ಲುವ ಋತುಸ್ರಾವದ ರಕ್ತವನ್ನು ನೆಕ್ಕುತ್ತಾ ಹಣೆಗೆ ಹಚ್ಚಿಕೊಂಡು ದೈವಗಳನ್ನು ಆರಾಧಿಸುವ ತಾಂತ್ರಿಕರ ಮತ ಸಂಪ್ರದಾಯಗಳನ್ನೂ ಅಂಗೀಕರಿಸಬೇಕಾಗುತ್ತದೆ. ಈ ರೀತಿಯಲ್ಲಿ ದೈವಗಳನ್ನು ಸಂತೃಪ್ತಿಪಡಿಸುವ ಅದೆಷ್ಟೋ ಮ್ಲೇಚ್ಛವಾದ ಅತ್ಯಂತ ನಿಕೃಷ್ಟವಾದ ಪದ್ಧತಿಗಳಿವೆ. ಅದನ್ನು ನಡೆಸುವವರ ದೃಷ್ಟಿಯಲ್ಲಿ ಅದು ಕೂಡಾ ಪವಿತ್ರವೂ ಆರಾಧನೆಯೂ ಆಗಿರುತ್ತದೆ. ನಮಗೆ ಇವುಗಳನ್ನು ಆರಾಧನೆಗಳೆಂದು ಸ್ವೀಕರಿಸಲಾಗುವುದಿಲ್ಲವೆನ್ನುವುದು ಬೇರೆ ಪ್ರಶ್ನೆ. ಅವರವರ ಇಷ್ಟ ಪ್ರಕಾರ ಆರಾಧನಾ ಕರ್ಮಗಳು ನಿರ್ವಹಿಸಲ್ಪಡಬೇಕೆನ್ನುವ ಅಭಿಪ್ರಾಯ ನಮಗೆ ಯಾರಿಗೂ ಇಲ್ಲವೆಂದಾದರೆ ಅದರ ಅರ್ಥ, ಒಬ್ಬೊಬ್ಬರು ಅವರವರಿಗೆ ತೋಚಿದಂತಹಾ ಆರಾಧನಾ ಕ್ರಮವನ್ನು ಅನುಸರಿಸುವುದಲ್ಲ. ಬದಲಾಗಿ, ದೃಢೀಕರಿಸಲ್ಪಡುವ ಆರಾಧನಾ ಕ್ರಮಗಳ ಮೂಲಕವೇ ಪ್ರತಿಯೊಬ್ಬರೂ ದೇವ ಸಾಮಿಪ್ಯವನ್ನು ಅನ್ವೇಶಿಸಿಕೊಳ್ಳಬೇಕು ಎನ್ನುವುದಾಗಿದೆ. ಈಗ

ಏಕದೇವನನ್ನು ಆರಾಧಿಸುವ ಕ್ರಮ ಹೇಗೆಂದು ಮನವರಿಕೆ ಮಾಡಿಕೊಳ್ಳಲು ದೇವದತ್ತವಾದುದೆಂಬ ದೃಢೀಕರಣವಿರುವ ವಿಧಾನವನ್ನು ಅವಲಂಬಿಸಬೇಕೆನ್ನುವುದು ವ್ಯಕ್ತವಾಗುತ್ತದೆ.

ಇಂದು ಪ್ರಚಲಿತವಿರುವ ಗ್ರಂಥ'ಗಳಲ್ಲಿ ದೇವದತ್ತವಾಗಿ ಬಂದಿರುವುದೆಂದು ದೃಢೀಕರಿಸಿಕೊಡಬಲ್ಲ, ಶೇಕಡಾ ನೂರರಷ್ಟು ಭರವಸೆಗೆ ಅರ್ಹವಾದ ಏಕೈಕ ಪ್ರಮಾಣೀಕೃತ ದೈವಿಕ ಗ್ರಂಥ ಕುರ್‌ಆನ್ ಆಗಿದೆ. ಕುರ್‌ಆನ್ ಮತ್ತು ಅದನ್ನು ಪ್ರಾಯೋಗಿಕಗೊಳಿಸಿದ ಪ್ರವಾದಿಯ ಚರ್ಯೆಯು ತಿಳಿಸಿ ಕೊಡುವ ರೀತಿಯಲ್ಲಿ ಮಾತ್ರ ದೇವನನ್ನು ಆರಾಧಿಸಬೇಕು ಎಂಬ ಇಸ್ಲಾಮಿನ ನಿರ್ದೇಶನದ ಹಿಂದಿನ ಯುಕ್ತಿಯು ಇಲ್ಲಿ ನಮಗೆ ಸ್ಪಷ್ಟವಾಗುತ್ತದೆ.

## ಇಸ್ಲಾಮಿನಲ್ಲಿ ಆರಾಧನಾ ಕರ್ಮಗಳು

ಇಸ್ಲಾಮ್ ಕಲಿಸುವ ಆರಾಧನಾ ಕರ್ಮಗಳು ಏಕದೇವತ್ವವೆಂಬ ಆಶಯವನ್ನು ಎಲ್ಲಾ ಅರ್ಥದಲ್ಲೂ, ಜೀವನದ ಎಲ್ಲಾ ರಂಗಗಳಲ್ಲೂ ಪ್ರಾಯೋಗಿಕಗೊಳಿಸಿ ಆ ಮೂಲಕ ಪ್ರಥಮವಾಗಿ ವ್ಯಕ್ತಿಯನ್ನು, ನಂತರ ಅವನ ಕುಟುಂಬ, ಸಮೂಹ ಮತ್ತು ರಾಷ್ಟ್ರವನ್ನು ಸಂಸ್ಕರಿಸಿ ಶುದ್ಧೀಕರಿಸುತ್ತದೆ.

ಐದು ಸಮಯದ ನಮಾಝ್ ಒಬ್ಬ ಮುಸಲ್ಮಾನನ ಮಟ್ಟಿಗೆ ಯಾವುದೇ ಕಾರಣಕ್ಕೂ ಎಂತಹಾ ಸಂದರ್ಭದಲ್ಲೂ ತೊರೆಯಲೇ ಬಾರದಂತಹಾ ಒಂದು ಆರಾಧನಾ ಕರ್ಮವಾಗಿದೆ. ಮುಸಲ್ಮಾನನ ದಿನಚರಿ ಆರಂಭ ಗೊಳ್ಳುವುದೇ ನಮಾಝ್ ನಿಂದಾಗಿರುತ್ತದೆ. ಅರುಣೋದಯಕ್ಕಿಂತ ಮೊದಲು ನಿರ್ವಹಿಸಲಾಗುವ ಪ್ರಭಾತದ ನಮಾಝ್‌ನಲ್ಲಿ ಸರ್ವಶಕ್ತನಾದ ಅಲ್ಲಾಹುವಿನ ಮುಂದೆ ನಿಂತು ಅವನನ್ನು ಸ್ತುತಿಸುತ್ತಾ ಕೆಡುಕುಗಳಿಂದ ಮುಕ್ತನಾಗಿ ಜೀವನವನ್ನು ಸಾಗಿಸಲು ಅವನ ಅನುಗ್ರಹವನ್ನು ಅಪೇಕ್ಷಿಸುತ್ತಾ ದಿನಚರಿಯನ್ನು ಆರಂಭಿಸುವ ಒಬ್ಬನಿಗೆ ನಂತರ ಅಲ್ಲಾಹನ ಕ್ರೋಧಕ್ಕೆ ಒಳಗಾಗುವಂತಹಾ ಕಾರ್ಯಗಳಲ್ಲಿ ತೊಡಗಲು ಸಾಧ್ಯವೇ........? ಪ್ರಭಾತದ ನಮಾಝ್‌ನಲ್ಲಿ ಗಳಿಸಿದ ಆತ್ಮಶುದ್ಧಿಯ ಬೆಳಕು ನಂದಿ ಹೋಗುವ ಮೊದಲೇ ಮಧ್ಯಾಹ್ನದ ನಮಾಝ್ ಸಮಾಗತವಾಗುತ್ತದೆ. ಮಧ್ಯಾಹ್ನದಲ್ಲಿ ಮತ್ತೆ ಅವನು ತನ್ನ ಪ್ರಭುವಿನಿಂದ ಪಾಪ ವಿಮೋಚನೆಯನ್ನು ಬೇಡುತ್ತಾನಲ್ಲದೆ ನನ್ನನ್ನು ಪಥಭ್ರಷ್ಟನಾಗಿ ಮಾಡದಿರೆಂದು ನಿಂತು ಬಾಗಿ ಮತ್ತು ಸಾಷ್ಟಾಂಗವೆರಗಿ ಪ್ರಾರ್ಥಿಸುತ್ತಾನೆ. ಮಧ್ಯಾಹ್ನದ ನಮಾಝ್‌ನ ನೆನಪು ಅಳಿಯುವುದಕ್ಕಿಂತ ಮೊದಲೇ ಸಂಜೆಯ ನಮಾಝ್‌ನ ಸಮಯ ಸಂಜಾತವಾಗುತ್ತದೆ. ಅಲ್ಲಿ ಮತ್ತೆ ಅವನು ದೇವನ ಶಾಸನ ಅನುಸರಿಸಿ ನಡೆವ ಮತ್ತು ಪಾಪ ಕಾರ್ಯಗಳಿಂದ ಸಂಪೂರ್ಣವಾಗಿ ಸರಿದು ನಿಲ್ಲುವ ಪ್ರತಿಜ್ಞೆ ಕೈಗೊಳುತ್ತಾನೆ. ಸಂಜೆಯ ನಮಾಝಿನಿಂದ ಗಳಿಸಿದ ಆತ್ಮಶುದ್ಧಿ ಸ್ಮೃತಿ ಪಟಲದಿಂದ ಮರೆಯಾಗುವ ಮೊದಲೇ ಸೂರ್ಯಾಸ್ತದ ಸಮಯ ಬಂದು ತಲಪುತ್ತದೆ. ಆಗ ನಿರ್ವಹಿಸಲಾಗುವ (ಮಗ್ರಿಬ್) ನಮಾಝ್‌ನಲ್ಲಿ ಇನ್ನೊಮ್ಮೆ ಅವನು ಅವನ ಪ್ರಭುವನ್ನು ದರ್ಶಿಸುತ್ತಾನೆ ಮತ್ತು ಹೃನ್ಮನಗಳನ್ನು ಶುದ್ಧೀಕರಿಸಿಕೊಳ್ಳುತ್ತಾನೆ. ಬಳಿಕ ರಾತ್ರಿ ಆವರಿಸಿ ಮನದಲ್ಲಿ ಇನ್ನೇನು ಕೆಟ್ಟ ವಿಚಾರಗಳು ಹುಟ್ಟಿಕೊಳ್ಳುತ್ತವೆನ್ನುವಾಗ ರಾತ್ರಿಯ ನಮಾಝ್(ಇಶಾ)ನ ಕರೆ ಮೊಳಗುತ್ತದೆ. ಅವನು ಮತ್ತೆ ತನ್ನ ಪ್ರಭುವಿನ ಸ್ಮರಣೆಯಲ್ಲಿ ಮಗ್ನನಾಗುತ್ತಾನೆ. ಮೋಕ್ಷದ ಮಾರ್ಗದಲ್ಲಿ ಮುನ್ನಡೆಸೆಂದು ತನ್ಮಯತೆಯಿಂದ ಪ್ರಾರ್ಥಿಸುತ್ತಾ ತನ್ನ ಪ್ರಭುವನ್ನು ಸಂತೃಪ್ತಿ ಪಡಿಸಲು ಪ್ರಯತ್ನಿಸುತ್ತಾನೆ.

ಐದು ಹೊತ್ತು ಸರಿಯಾಗಿ ನಮಾಝ್ ನಿರ್ವಹಿಸುವ ಒಬ್ಬ ವ್ಯಕ್ತಿಗೆ ತನ್ನ ಸ್ವೇಚ್ಛೆ ಅಥವಾ ದೇಹಾಶಕ್ತಿಯ ದಾಸನಾಗಲು ಸಾಧ್ಯವೇ ಇಲ್ಲ. ಅಂತರಂಗವನ್ನೂ ಬಹಿರಂಗವನ್ನೂ ಸಮಾನವಾಗಿ ಅರಿಯುವ ಸಂರಕ್ಷಕನ ಮುಂದೆ ನಿಂತು ಏಕನಿಷ್ಠನಾಗಿ ಪ್ರಾಮಾಣಿಕವಾಗಿ ದಿನದಲ್ಲಿ ಐದು ಸಲ ನಮಾಝ್ ನಿರ್ವಹಿಸುವ ಒಬ್ಬ ವ್ಯಕ್ತಿ ಪಾಪ ಕಾರ್ಯಗಳಲ್ಲಿ ಬಿದ್ದು ಬಿಡಲು ಸಾಧ್ಯವೇ ಇಲ್ಲ. ಅದನ್ನೇ ಆಗಿದೆ ಅಲ್ಲಾಹು ಅವನ ಗ್ರಂಥದಲ್ಲಿ ದೃಢೀಕರಿಸಿರುವುದು. **"ಖಂಡಿತವಾಗಿಯೂ ನಮಾಝ್ ನೀಚಕೃತ್ಯಗಳಿಂದ ಮತ್ತು ನಿಷಿದ್ಧ ಕರ್ಮಗಳಿಂದ ತಡೆಯುತ್ತದೆ."** (29/45)

ನಮಾಝ್‌ನ ಬಳಿಕ ಇಸ್ಲಾಮಿನಲ್ಲಿ ಅತ್ಯಂತ ಮಹತ್ವವಿರುವ ಆರಾಧನಾ ಕಾರ್ಯವಾಗಿದೆ ಝಕಾತ್ ಅಥವಾ ಕಡ್ಡಾಯ ದಾನ. ಸಮುದಾಯದ ದುರ್ಬಲ ವರ್ಗದವರೊಂದಿಗೆ ಸಹತಾಪ ವ್ಯಕ್ತ ಪಡಿಸುವ, ಅವರಿಗೆ ಸಹಾಯ ಹಸ್ತವನ್ನು ಚಾಚುತ್ತಾ ಅವರನ್ನು ಆದರಿಸುವ, ಅವರ ವಿಷಮತೆಯನ್ನು ಪರಿಹರಿಸುವ ನಿಟ್ಟಿನಲ್ಲಿ ಇಚ್ಛಾಶಕ್ತಿಯನ್ನುಂಟು ಮಾಡುವಂತಹಾ ಒಂದು ಆರಾಧನಾ ಕರ್ಮವಾಗಿದೆ ಝಕಾತ್. ಸಂಪಾದನೆ, ಕೃಷಿ ಮತ್ತು ಜಾನುವಾರು ಸಾಕಣೆ ಮುಂತಾದ ಆದಾಯ ಮೂಲಗಳ ಪ್ರಮಾಣವನ್ನು ಅನುಸರಿಸಿ ಝಕಾತ್ ನೀಡಬೇಕಾದ್ದು ಅದರ ಮ್ಹಾಲಕನ ಮೇಲೆ ಕಡ್ಡಾಯವಾಗಿದೆ. ಅದು ಧನಿಕರ ಸೊತ್ತಿನಲ್ಲಿರುವ ಬಡವರ ಹಕ್ಕೆಂದು ಇಸ್ಲಾಮ್ ಸಾರಿದೆ. ಅದನ್ನೊಂದು ಧನಿಕರು ಬಡವರ ಮೇಲೆ ತೋರುವ ಔದಾರ್ಯವೆಂದು ತಿಳಿಯಬಾರದೆಂದು ಇಸ್ಲಾಮ್ ಕಲ್ಪಿಸುತ್ತದೆ. ಶ್ರೀಮಂತರಿಂದ ಅದನ್ನು ಸಂಗ್ರಹಿಸಿ ಅರ್ಹ ಬಡವರಿಗೆ ಅದನ್ನು ವಿತರಿಸುವ ಹೊಣೆಗಾರಿಕೆಯನ್ನು ಇಸ್ಲಾಮೀ ರಾಷ್ಟ್ರಗಳಲ್ಲಿ ಅಲ್ಲಿನ ಸರಕಾರವು ನಿರ್ವಹಿಸುತ್ತದೆ. ಇಸ್ಲಾಮೀ ಆಡಳಿತ ಜಾರಿಯಲ್ಲಿಲ್ಲದ ಪ್ರದೇಶಗಳಲ್ಲಿ ಅದಕ್ಕಾಗಿ ಸ್ಥಾಪಿಸಲ್ಪಟ್ಟ ಸ್ಥಾಪನೆಗಳು ಆ ಕಾರ್ಯ ನಿರ್ವಹಿಸಬೇಕಾಗಿದೆ.

ಸಾಂಪತ್ತಿಕವಾದ ಅತ್ಯಾಗ್ರಹವೇ ಮನುಷ್ಯರನ್ನು ಹೆಚ್ಚಾಗಿ ಮಹಾಪಾಪಗಳೆಡೆಗೆ ಕೊಂಡೊಯ್ಯುತ್ತದೆ. ಸಾಂಪತ್ತಿಕವಾದ ತ್ಯಾಗವಾಗಿದೆ ಝಕಾತ್. ಧನ ಮೋಹವನ್ನು, ಸ್ವಾರ್ಥತೆಯನ್ನೂ ದೂರೀಕರಿಸಿ ತ್ಯಾಗ ಸನ್ನದ್ಧತೆಯನ್ನು-ಪರೋಪಕಾರ ಪ್ರಜ್ಞೆಯನ್ನು ಬೆಳೆಸುವ, ಮನುಷ್ಯ ಮನಸ್ಸುಗಳನ್ನು ಶುಚೀಕರಿಸುವ, ಸಂಸ್ಕರಿಸುವ ಒಂದು ಕರ್ಮವಾಗಿದೆ ಝಕಾತ್. ದೇವನ ನಿರ್ದೇಶನಗಳ ಪ್ರಕಾರ ಝಕಾತನ್ನು ಸಂಗ್ರಹಿಸಿ ವಿತರಿಸುವ ನಿಟ್ಟಿನಲ್ಲಿ ಸಮೂಹವು ಸನ್ನದ್ಧವಾದರೆ ಜಗತ್ತಿನಿಂದ ದಾರಿದ್ರ್ಯತೆಯನ್ನು ಸಂಪೂರ್ಣವಾಗಿ ನಿವಾರಣೆ ಮಾಡಲು ಸಾಧ್ಯವಿದೆ.

ಇಸ್ಲಾಮಿನ ಆರಾಧನಾ ಕರ್ಮಗಳಲ್ಲಿ ಝಕಾತಿನ ನಂತರದ ಸ್ಥಾನವನ್ನು ಉಪವಾಸ ಅಥವಾ ವ್ರತಾನುಷ್ಠಾನವು ಪಡೆದುಕೊಂಡಿದೆ.

ಸೂರ್ಯೋದಯದಿಂದ ಸೂರ್ಯಾಸ್ತ ತನಕ ಅನ್ನ ಪಾನೀಯಗಳನ್ನೂ, ದೇಹೇಚ್ಛೆಗಳನ್ನೂ ತೊರೆಯಬೇಕೆನ್ನುವುದು ಇಸ್ಲಾಮಿನ ಬೇಡಿಕೆಯಾಗಿದೆ. ದೇವನ ಸಂಪ್ರೀತಿಯನ್ನು ಅಪೇಕ್ಷಿಸಿಕೊಂಡು ದೇಹವನ್ನು ದಂಡಿಸುವ, ಆಹಾರ ಪಾನೀಯಗಳನ್ನು ತೊರೆವ, ದೇಹಾಸಕ್ತಿಗಳನ್ನು ಕಡೆಗಣಿಸುವ ಒಬ್ಬನಲ್ಲಿ ದೇವ ಭಯವು ವರ್ಧಿಸುವುದೆನ್ನುವುದರಲ್ಲಿ ಯಾವುದೇ ಸಂಶಯವಿರುವುದಿಲ್ಲ. ದೇವನು ಸದಾ ನನ್ನನ್ನು ನೋಡುತ್ತಿರುವನು ಎಂಬ ಪ್ರಜ್ಞೆಯು ಮುಸ್ಲಿಮರಲ್ಲಿ ವ್ರತಾನುಷ್ಠಾನದ ಪ್ರೇರಣೆಯನ್ನು

ಉಂಟುಮಾಡುತ್ತದೆ. ನಿರಂತರ ಒಂದು ತಿಂಗಳು ಕಡ್ಡಾಯವಾಗಿ ವ್ರತಾನುಷ್ಠಿಸಬೇಕೆನ್ನುವುದು ಮುಸ್ಲಿಮರಿಗೆ ಇಸ್ಲಾಮಿನ ಆದೇಶವಾಗಿದೆ. ಹೀಗೆ ನಿರಂತರ ಒಂದು ತಿಂಗಳು ಉಪವಾಸ ಅನುಷ್ಠಿಸುವವರಲ್ಲಿ ಭಯ ಭಕ್ತಿಯು ವೃದ್ಧಿಸುವುದಲ್ಲದೆ ಜೀವನದಲ್ಲಿ ಯಾವುದೇ ಪಾಪಗಳು ಸಂಭವಿಸದಂತೆ ಎಚ್ಚರ ವಹಿಸುವ ಬೋಧವೂ ಅವನಲ್ಲಿ ಉಂಟಾಗುವುದು. ಉಪವಾಸಿಗರಲ್ಲಿ ತ್ಯಾಗ, ಸೇವೆ, ಸಹಾಯ ಮತ್ತು ಅರ್ಪಣಾ ಮನೋಭಾವವು ಹುಟ್ಟಿಕೊಳ್ಳುವುದಲ್ಲದೆ, ಸ್ನೇಹ-ಸಮಾನತೆ ಮತ್ತು ಸಾಮೂಹಿಕ ದೃಷ್ಟಿಕೋನವನ್ನೂ ಅದು ಅವನಲ್ಲಿ ಉಂಟು ಮಾಡುತ್ತದೆ. ಹಸಿವಿನ ರುಚಿಯನ್ನು ಅನುಭವಿಸುವ ಮೂಲಕ ಸಮುದಾಯದ ಬಡವರು ದಾರಿದ್ರ್ಯವಂತರ ಅಳಲನ್ನು ಅರಿತುಕೊಳ್ಳುವ, ಅವರೊಂದಿಗೆ ಸಹತಾಪ ಸೂಚಿಸುವ, ಅವರ ಕುರಿತು ಆಲೋಚಿಸುವ ಪ್ರೇರಣೆ ದೊರಕುವುದು. ಉಪವಾಸವು ಎಂತಹಾ ಜಿಪುಣನ್ನೂ ಉದಾರಿಯನ್ನಾಗಿಯೂ, ಬಡವರನ್ನು ಪರಿಗಣಿಸುವವನಾಗಿಯೂ ಮಾಡುತ್ತದೆ. ಹೀಗೆ ವ್ಯಕ್ತಿಯನ್ನು ಸ್ವಯಂ ನಿಯಂತ್ರಣದಿಂದ ಸ್ವಚ್ಛಗೊಳಿಸಿ, ಮ್ಲೇಛ ಸ್ವಭಾವಗಳಿಂದ ಮುಕ್ತನಾಗಿ ಮಾಡುವುದರೊಂದಿಗೆ ಧನಿಕನನ್ನೂ, ದರಿದ್ರನನ್ನೂ ಐಕ್ಯಗೊಳಿಸುವ ಒಂದು ಮಹದೋಪಾಯವು ವ್ರತಾನುಷ್ಠಾನದಲ್ಲಿ ಅಡಕಗೊಂಡಿದೆ.

ಇಸ್ಲಾಮಿನ ಆರಾಧನಾ ಕರ್ಮಗಳಲ್ಲಿ ಕೊನೆಯದು ಹಜ್ಜ್ ಆಗಿದೆ. ಇದು ಮನುಷ್ಯನು ಮತ್ತು ದೇವನ ಮಧ್ಯೆ ಇರುವ ಸಂಬಂಧವನ್ನು ಸುದೃಢಗೊಳಿಸುವ ನಿಟ್ಟಿನಲ್ಲಿ ಅತ್ಯಂತ ಸಹಕಾರಿಯಾದ ರೀತಿಯಲ್ಲಿ ಸಂಯೋಜಿಸಲ್ಪಟ್ಟ ಒಂದು ಕರ್ಮವಾಗಿದೆ. ಆರೋಗ್ಯ ಮತ್ತು ಆರ್ಥಿಕ ಸಾಮರ್ಥ್ಯವಿರುವವರು ಜೀವನದಲ್ಲಿ ಒಮ್ಮೆ ಹಜ್ಜ್ ನಿರ್ವಹಿಸುವುದು ಕಡ್ಡಾಯವೆನ್ನುವುದು ಇಸ್ಲಾಮಿನ ಶಾಸನವಾಗಿದೆ. ಬಹುದೇವಾರಾಧನೆಯೊಂದಿಗೆ ಯಾವುದೇ ರೀತಿಯ ಸಾಮ್ಯತೆ ಇರದ ಒಂದು ಪವಿತ್ರಯಾತ್ರೆಯಾಗಿದೆ ಹಜ್ಜ್. ಈ ಯಾತ್ರೆಯಲ್ಲಿ ಪ್ರವರ್ತಿಸಲಿರುವ ಕರ್ಮಗಳಲ್ಲಿ ಹೆಚ್ಚಿನವು ಇಬ್ರಾಹೀಮ್(ಅ)ರವರ ಸ್ಮರಣೆಯಲ್ಲಿ ಅಧಿಷ್ಠಿತವಾಗಿದೆ. ಇಬ್ರಾಹೀಮ್(ಅ) ಏಕದೇವರಾಧನೆಯ ಆಶಯವನ್ನು ಸ್ವೀಕರಿಸಿ ಪ್ರಚರಿಸಿದ ಕಾರಣಕ್ಕೆ ಕುಟುಂಬದಿಂದಲೂ, ಸಮೂಹದಿಂದಲೂ ಬಹಿಷ್ಕರಿಸಲ್ಪಟ್ಟರು. ಮುವಹ್ಹಿದ್(ಏಕದೇವಾರಾಧಕ) ಆಗಿ ಜೀವಿಸುವ ನೆಲೆಯಲ್ಲಿ ಹಲವಾರು ರೀತಿಯ ಕಷ್ಟ-ಕಾರ್ಪಣ್ಯಗಳನ್ನು ಸಹಿಸಿದರು. ಅಲ್ಲಾಹನ ಸಂಪ್ರೀತಿಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಲು ಸನ್ನದ್ಧರಾದರು. ಆದ್ದರಿಂದ ಈ ಕರ್ಮವನ್ನು ಪರಿಪೂರ್ಣ ವಿಶ್ವಾಸ ಮತ್ತು ಆತ್ಮಾರ್ಥತೆಯಿಂದ ನಿರ್ವಹಿಸುವ ಮೂಲಕ ಪಶ್ಚಾತ್ತಾಪ ಬೋಧವಿರುವವರು ಸಂಪೂರ್ಣ ಪಾಪ ಮುಕ್ತರಾಗುವರು. ಅದರೊಂದಿಗೆ ಇಸ್ಲಾಮ್ ಪ್ರತಿಪಾದಿಸುವ ವಿಶ್ವ ಬ್ರಾತೃತ್ವ ಬೋಧವೂ ಅವರಲ್ಲಿ ಉಂಟಾಗುವುದು. ಲೋಕದ ವಿವಿಧ ಭಾಗಗಳಿಂದ ಬಂದ ಲಕ್ಷಾಂತರ ಜನರಲ್ಲಿ ಒಬ್ಬನಾಗಿ ಹಜ್ಜ್ ನಿರ್ವಹಿಸುವನು ಮಾರ್ಪಡುವನು. ಅಲ್ಲಿರುವವರೆಲ್ಲರಿಗೂ ಒಂದೇ ವೇಷ, ಒಂದೇ ಸ್ವರ, ಹೃದಯದಲ್ಲಿ ದೇವನ ಸ್ಮರಣೆ, ತುಟಿಯಂಚಿನಲ್ಲಿ ದೇವ ಸ್ತುತಿಗಳು, ಉಚ್ಛ-ನೀಚನೆಂಬ ಬೇಧವಿಲ್ಲ. ಬಿಳಿಯ-ಕರಿಯನೆಂಬ ತಕರಾರಿಲ್ಲ, ಬಡವ-ಶ್ರೀಮಂತನೆಂಬ ತಾರತಮ್ಯವಿಲ್ಲ. ನಾಯಕ-ಕಾರ್ಯಕರ್ತನೆನ್ನುವ ಅಂತರವಿಲ್ಲ. ಎಲ್ಲರೂ ಒಂದೇ ರೀತಿ ಎಲ್ಲರಿಗೂ ಒಂದೇ ಸ್ಥಾನ. ಒಂದೇ ರೀತಿಯ ಉಡುಪು. ಒಂದೇ ರೀತಿಯ ಘೋಷಣೆ. ಒಂದೇ ಭಾವನೆಯೊಂದಿಗೆ ಅವರು ಪ್ರವರ್ತಿಸುವ

ಕರ್ಮವೂ ಒಂದೇ... ಇಸ್ಲಾಮಿನ ಆಶಯವೇ ಏಕದೇವ ಏಕ ಸಮುದಾತಯವೆನ್ನುವುದಾಗಿದೆ. ಈ ಆಶಯದ ಸಂಪೂರ್ಣ ಸಾಕ್ಷಾತ್ಕಾರವೇ 'ಹಜ್ಜ್' ಆಗಿದೆ.

ಈ ರೀತಿ ಏಕದೇವಾರಾಧನೆ ಎಂಬ ಆಶಯವನ್ನು ಅದರ ಪರಿಪೂರ್ಣ ರೂಪದಲ್ಲಿ ಪ್ರಾಯೋಗಿಕವಾಗಿ ಪ್ರಸ್ತುತಪಡಿಸುವ ವಿಧಾನವಾಗಿದೆ ಇಸ್ಲಾಮ್.

ಏಕದೇವನ ಹೊರತಾಗಿ ಇನ್ನಾರೂ ಆರಾಧಿಸಲ್ಪಡಬಾರದು ಎಂಬ ಇಸ್ಲಾಮಿನ ಮೂಲ ಸಿದ್ಧಾಂತದ ಮುಂದೆ ಕುಸಿದು ಬಿದ್ದದ್ದು ವಿಗ್ರಹಗಳು, ಶವ ಕುಟೀರಗಳು ಮತ್ತು ದೇವತ್ವವನ್ನು ಪ್ರತಿಪಾದಿಸುತ್ತಿದ್ದವರು ಮಾತ್ರವಾಗಿರಲಿಲ್ಲ. ಬದಲಾಗಿ ದೇವರು ಮತ್ತು ಮನುಷ್ಯರ ಮಧ್ಯವರ್ತಿಗಳಾದ ದಲ್ಲಾಲಿಗಳ ವೇಷಧರಿಸಿದ ಪೌರೋಹಿತ್ಯವೂ ಅದರಲ್ಲಿ ಸೇರಿಕೊಂಡಿತ್ತು. ಮನುಷ್ಯನ ಕಂಠನಾಡಿಗಿಂತಲೂ ಸಮೀಪದಲ್ಲಿರುವವನೆಂದು ಅಲ್ಲಾಹನನ್ನು ಕುರ್‌ಆನ್ ಪರಿಚಯಿಸಿ ಕೊಡುತ್ತದೆ. ಹಾಗಿರುವಾಗ ಅಲ್ಲಾಹು ಮತ್ತು ಮನುಷ್ಯರ ಮಧ್ಯೆ ಯಾವುದೇ ಮಧ್ಯವರ್ತಿಗಳ ಅವಶ್ಯಕತೆ ಇರುವುದಿಲ್ಲವೆನ್ನುವುದೇ ಇಸ್ಲಾಮಿನ ಬೋಧನೆಯಾಗಿದೆ. ಯಾವುದೇ ರೀತಿಯ ಪೌರೋಹಿತ್ಯವನ್ನೂ ಇಸ್ಲಾಮ್ ಅಂಗೀಕರಿಸುವುದಿಲ್ಲ. ದೇವರುಗಳ ಹೆಸರಲ್ಲಿ ಮನುಷ್ಯರು ಪರಸ್ಪರ ಹೊಡೆದಾಡುವಂತೆ ಮಾಡುವ ಪುರೋಹಿತರ ಶೋಷಣೆಯಿಂದ ಮನುಷ್ಯರಾಶಿಯನ್ನು ಇಸ್ಲಾಮ್ ರಕ್ಷಿಸಿದೆ.

## ಬಾತೃತ್ವದ ಬೆಸುಗೆ

ಏಕದೇವಾರಾಧನೆ ಮನುಷ್ಯ ವರ್ಗವನ್ನು ಸಕಲ ರೀತಿಯ ಸಂಕುಚಿತ ಮನೋಭಾವಗಳಿಂದ ಬೇರ್ಪಡಿಸುತ್ತದೆ. ಸ್ವದೇಶಿ-ವಿದೇಶಿ, ಅವರ್ಣೀಯ-ಸವರ್ಣೀಯ, ಕರಿಯ-ಬಿಳಿಯನೆಂಬ ಬೇಧಭಾವಗಳನ್ನು, ದೇಶ-ಭಾಷೆ, ವರ್ಗ-ವರ್ಣ-ಗೋತ್ರಗಳೆಂಬ ತಾರತಮ್ಯಗಳನ್ನು ಅಳಿಸಿ ಸರ್ವಮಾನವ ಕುಲವೇ ಏಕದೇವನ ಸೃಷ್ಟಿಗಳೆಂದೂ ಒಬ್ಬ ತಂದೆ ಮತ್ತು ಒಂದೇ ತಾಯಿಗೆ ಸೇರಿದ ಒಂದು ಕುಟುಂಬವೆಂದು ಘೋಷಿಸುತ್ತಾ ಜನರನ್ನು ಭಾತೃತ್ವದ ದಾರದಲ್ಲಿ ಪೋಣಿಸುತ್ತದೆ. ಸರ್ವಶಕ್ತನೂ ಸರ್ವೋನ್ನನೂ ಆದ ಆ ಸೃಷ್ಟಿಕರ್ತನ ಮುಂದೆ ಮಾತ್ರ ಈ ವಿಭಾಗಗಳು ಶಿರಾಬಾಗಿ ನಮಿಸುವಾಗ ಅವರನ್ನು ಭಿನ್ನ-ಭಿನ್ನವಾಗಿ ಬೇರ್ಪಡಿಸುವ ಸರ್ವ ಗೋಡೆಗಳೂ ಕುಸಿದು ಬೀಳುವುದು. ಸೃಷ್ಟಿಕರ್ತನ ಮುಂದೆ ಎಲ್ಲರೂ ಸರಿಸಮಾನರೆಂಬ ಅಭಿಪ್ರಾಯ ಬೆಳೆದು ಬರುವಾಗ ಜನರ ಮಧ್ಯೆ ಮೇಲ್ಮೆ ಪ್ರದರ್ಶಿಸುವ ಪಟ್ಟಭದ್ರ ಹಿತಾಸಕ್ತರ ಪಾದಗಳ ಕೆಳಗಿನ ಭೂಮಿ ಜಾರ ತೊಡಗುತ್ತದೆ. ಒಬ್ಬನೇ ದೇವ, ಒಂದೇ ಸಮುದಾಯವೆಂಬ ಇಸ್ಲಾಮಿನ ಪ್ರಖ್ಯಾಪನೆ ಕುಲ-ಗೋತ್ರಗಳ ಹೆಸರಿನಲ್ಲಿ ಸದಾ ಯುದ್ಧ ಮಾಡುತ್ತಿದ್ದ ಅರಬಿಗಳನ್ನು ಅದೆಂತಹಾ ಬಾತೃತ್ವಬಂಧದಲ್ಲಿ ಬಂಧಿಸಿ ಬಿಟ್ಟಿತೆನ್ನುವುದನ್ನು ಚರಿತ್ರೆಯ ಪುಟಗಳಿಂದ ಕಂಡುಕೊಳ್ಳಬಹುದಾಗಿದೆ. ದೇಶ-ಭಾಷೆ, ವರ್ಗ-ವರ್ಣಗಳ ಹೆಸರಲ್ಲಿರುವ ಸಕಲ ಮಿಥ್ಯಾಭಿಮಾನಗಳನ್ನು ಅಳಿಸಿ ಹಾಕುವ ಕುರ್‌ಆನಿನ ಪ್ರಖ್ಯಾಪನೆ ನೋಡಿ.

**"ಓ ಮಾನವರೇ! ಖಂಡಿತವಾಗಿಯೂ ನಿಮ್ಮನ್ನು ನಾವು ಒಬ್ಬ ಗಂಡು ಮತ್ತು ಒಂದು ಹೆಣ್ಣಿನಿಂದ ಸೃಷ್ಟಿಸಿದೆವು. ನೀವು ಪರಸ್ಪರ ಗುರುತಿಸಿಕೊಳ್ಳುವುದಕ್ಕೋಸ್ಕರ ನಿಮ್ಮನ್ನು ನಾವು**

**ವಿವಿಧ ಸಮುದಾಯ ಮತ್ತು ಗೋತ್ರಗಳನ್ನಾಗಿ ವಿಂಗಡಿಸಿದೆವು. ವಾಸ್ತವದಲ್ಲಿ ಅಲ್ಲಾಹನ ಬಳಿ ನಿಮ್ಮ ಪೈಕಿ ಅತ್ಯಂತ ಹೆಚ್ಚು ಗೌರವಾನ್ವಿತರು ನಿಮ್ಮ ಪೈಕಿ ಅತಿ ಹೆಚ್ಚು ದೇವಭಯವುಳ್ಳವನೇ ಆಗಿರುವನು. ಖಂಡಿತವಾಗಿಯೂ ಅಲ್ಲಾಹನು ಸರ್ವಜ್ಞನೂ ಸೂಕ್ಷ್ಮಜ್ಞಾನಿಯೂ ಆಗಿರುತ್ತಾನೆ''**49/19

ಪ್ರವಾದಿ(ಸ) ಘೋಷಿಸಿದರು,

**"ಅರಬಿಗೆ ಅನರಬಿಗಿಂತ ಅನರಬಿಗೆ ಅರಬಿಗಿಂತ, ಬಿಳಿಯನಿಗೆ ಕರಿಯನಿಗಿಂತ ಅಥವಾ ಕರಿಯನಿಗೆ ಬಿಳಿಯನಿಗಿಂತ ಯಾವುದೇ ರೀತಿಯ ಶ್ರೇಷ್ಟತೆ ಸಲ್ಲುವುದಿಲ್ಲ. ದೇವಭಯವೇ ಶ್ರೇಷ್ಟತೆಯ ಮಾನದಂಡವಾಗಿರುವುದು''**(ಮುಸ್ಲಿಮ್-ಅಬೂದಾವೂದ್)

**ಖಂಡಿತವಾಗಿಯೂ ನಿಮ್ಮೆಲ್ಲರ ಸೃಷ್ಟಿಕರ್ತನು ಒಬ್ಬನೆ. ನಿಮ್ಮೆಲ್ಲರ ತಂದೆಯೂ ಒಬ್ಬರೇ ಆಗಿದ್ದಾರೆ. ನೀವೆಲ್ಲರೂ ಆದಮ್(ಅ)ರಿಂದ.. ಆದಮ್(ಅ) ಮಣ್ಣಿನಿಂದ ಸೃಷ್ಟಿಸಲ್ಪಟ್ಟಿರುವರು''**

(ಮುಸ್ಲಿಮ್, ಅಬೂದಾವೂದ್)

ತೌಹೀದ್ ಅಥವಾ ಏಕದೇವರಾಧಾನೆಯೇ ಇಸ್ಲಾಮಿನ ಜೀವಾಳವಾಗಿದೆ. ತನ್ನೆಲ್ಲಾ ಆರಾಧನಾ ಕರ್ಮಗಳನ್ನು ಕೇವಲ ಅಲ್ಲಾಹನಿಗೆಂದು ನಿಶ್ಚಯಿಸುವವನಷ್ಟೇ ಅವನ ಜೀವನವನ್ನು ಸಂಪೂರ್ಣವಾಗಿ ದೇವನ ಇಚ್ಛೆಗೆ ಅಧೀನಪಡಿಸಲು ಸಾಧ್ಯ. ಸಕಲ ಪ್ರವಾದಿಗಳೂ ಪ್ರಚರಿಸಿದ ಧರ್ಮದ ಹೆಸರಾಗಿದೆ ಇಸ್ಲಾಮ್ ಎನ್ನುವುದನ್ನು ನಾವು ಮನವರಿಕೆ ಮಾಡಿಕೊಂಡೆವು. ಬಹುದೇವಾರಾಧಕರ ಆಚಾರ-ವಿಚಾರಗಳಿಗೆ ಹೊಂದಿಕೊಳ್ಳುವಂತಹಾ ಕೆಲವು ಸಂಪ್ರದಾಯಗಳು ಇಂದು ಇಸ್ಲಾಮಿನಲ್ಲಿ ಕಂಡು ಬರುತ್ತಿದ್ದರೆ ಅದು ಪುರೋಹಿತರ ಸೃಷ್ಟಿಯಾಗಿದೆ. ಇವುಗಳನ್ನು ಅವರು ಅವರ ಸ್ವಾರ್ಥ ತಾತ್ಪರ್ಯಗಳನ್ನು ಸಂರಕ್ಷಿಸಿಕೊಳ್ಳುವ ಸಲುವಾಗಿ ಸ್ವಯಂ ಸೃಷ್ಟಿಸಿದರೆಂದು ಈ ಕುರಿತಾಗಿ ಅಧ್ಯಯನಗಳು ತಿಳಿಸಿಕೊಡುತ್ತದೆ. ಆದ್ದರಿಂದ ಪರಲೋಕ ವಿಜಯವನ್ನು ಬಯಸುವವರು ಅಲ್ಲಾಹನಿಂದ ನಿಯುಕ್ತರಾದ ಪ್ರವಾದಿಗಳು ಕಲಿಸಿದ ಕ್ರಮವನ್ನು, ಸೃಷ್ಟಿಸಿ ಪರಿಪಾಲಿಸುತ್ತಿರುವ ಅಲ್ಲಾಹನಿಗೆ ಸಂಪೂರ್ಣವಾಗಿ ಶರಣಾಗುವ ವಿಧಾನವನ್ನು ಸ್ವೀಕರಿಸಿಕೊಳ್ಳುವುದು ಅನಿವಾರ್ಯವಾಗಿದೆ.

ಸತ್ಯವನ್ನು ಅರಿಯಲು ಮತ್ತು ಅದನ್ನು ಸ್ವೀಕರಿಸಿ ಜೀವನದಲ್ಲಿ ಅಳವಡಿಸಿಕೊಂಡು ನಡೆಯಲು ಸರ್ವಜ್ಞನಾದ ಅಲ್ಲಾಹನು ನಮ್ಮನ್ನು ಅನುಗ್ರಹಿಸಲಿ. ಅಮೀನ್

وصلى الله على نبينا محمد وعلى آله وصحبه وسلم

"ನಿನ್ನ ಮೂಲಕ ಒಬ್ಬನು ಸತ್ಯಮಾರ್ಗವನ್ನು ಸ್ವೀಕರಿಸಿದರೆ,
ಅದು ನಿನ್ನ ಮಟ್ಟಿಗೆ ಈ ಲೋಕ ಮತ್ತು ಅದರಲ್ಲಿರುವ
ಎಲ್ಲಾ ವಸ್ತುಗಳಿಗಿಂತಲೂ ಉತ್ತಮ"

– ಪ್ರವಾದಿ ಮುಹಮ್ಮದ್(ಸ)


ಪ್ರಕಾಶಕರು

خيركم من تعلم القرآن و علمه

**ದಾವಾ ಪಬ್ಲಿಕೇಶನ್ಸ್**

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಅಧೀನ ಸಂಸ್ಥೆ)

ಹಿರಾ ಕಾಂಪ್ಲೆಕ್ಸ್, 2-184/11, 2ನೇ ಬ್ಲಾಕ್,

ಕಾಟಿಪಳ್ಳ, ಮಂಗಳೂರು – 575 030

ಮೊಬೈಲ್ : 9986282449

E-mail : asshahadat@yahoo.co.in


₹. 25/-